ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್
…AVU' Kannada Weekly, KOPPA. - CHM. ಫೋನ್ : 114
…ರ್ಷ 15ನೇ ಸಂಚಿಕೆ ಕೊಪ್ಪ 3-12-1989 ಭಾನುವಾರ ಬೆಲೆ 60 ಪೈಸೆ

## ಸಹಕಾರಿ ನೌಕರರ ಸಂಘದ ಮನವಿ

ಕೊಪ್ಪ : ಪ್ರಾಥಮಿಕ ಕೃಷಿ ಸಹಕಾರಿ ಸಂಘಗಳ ನೌಕರರು ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಸೆ. 15 ರಿಂದಲೂ ಮುಷ್ಕರ ನಡೆಸುತ್ತಿದ್ದರೂ ಇನ್ನೂ ಬೇಡಿಕೆಗಳು ಈಡೇರದಿರುವುದರಿಂದ ಚಳುವಳಿಯನ್ನು ತೀವ್ರಗೊಳಿಸಲು ನೌಕರರ ರಾಜ್ಯ ಸಂಘ ತನ್ನ ಘಟಕಗಳಿಗೆ ಸೂಚನೆ ನೀಡಿ, ಕಾರ್ಯಕ್ರಮ ಹಾಕಿದೆ. ಅದರಂತೆ ಆದಷ್ಟು ಶೀಘ್ರವೇ ಬೇಡಿಕೆಗಳು ಈಡೇರಿ, ಚಳುವಳಿ ಅಂತ್ಯಗೊಳ್ಳುವ ನಿರೀಕ್ಷೆಯಿದೆ.

ಈ ಹಿನ್ನೆಲೆಯಲ್ಲಿ ಕೊಪ್ಪ, ಶೃಂಗೇರಿ, ನ. ರಾ ಪುರ ತಾ|| ಗಳ ಕೃಷಿ ಸಹಕಾರ ಸಂಘಗಳ ಅಧ್ಯಕ್ಷರು ಮತ್ತು ಕಾರ್ಯಕಾರಿ ಸಮಿತಿಗಳವರು ನೌಕರರಿಗೆ ಉತ್ತೇಜನ ಕೊಟ್ಟು, ನೌಕರರ ಬೇಡಿಕೆಗಳು ಈಡೇರುವವರೆಗೆ ಸಹಕರಿಸಬೇಕೆಂದು ಸಂಘದ ಕಾರ್ಯದರ್ಶಿ ಜಯವಂತ್ ಕಿಣಿ ಅತ್ಯಂತ ಕಳಕಳಿಯಿಂದ ವಿನಂತಿಸಿದ್ದಾರೆ.

# …ಾರತದ ಮೊತ್ತ ಮೊದಲ ಸಂಮಿಶ್ರ ಸರ್ಕಾರಕ್ಕೆ …ವಿಶ್ವನಾಥ ಪ್ರತಾಪ ಸಿಂಗ್ ಪ್ರಧಾನ ಮಂತ್ರಿ

ಕೇಂದ್ರದಲ್ಲಿ ಇದೇ ಮೊಟ್ಟಮೊದಲ ಬಾರಿಗೆ ರಚನೆಯಾಗುತ್ತಿರುವ ಸಂಮಿಶ್ರ ಸರ್ಕಾ… ನೇತೃತ್ವದಲ್ಲಿ. ಸ್ವತಂತ್ರ ಭಾರತದ 7ನೇ ಪ್ರಧಾನ ಮಂತ್ರಿಯಾಗಿ ವಿ. ಪಿ. ಸಿಂಗ್ …1ರಂದು ಪ್ರಮಾಣ ವಚನ ಸ್ವೀಕರಿಸಿದರು. ಹರ್ಯಾಣ ಮುಖ್ಯಮಂತ್ರಿ ದೇವಿಲಾಲ್ ಉಪ…ಧಾನಿಯಾಗಿ ಪ್ರಮಾಣ ವಚನ ಸ್ವೀಕರಿಸಿದ್ದಾರೆ.

**…30 ದಿನದೊಳಗಾಗಿ ಲೋಕಸಭಾ ಅಧಿವೇಶನ ಕರೆದು ತಮ್ಮ ಬಹುಮತ …ತು ಪಡಿಸುವಂತೆ ನೂತನ ಪ್ರಧಾನಿಗೆ ರಾಷ್ಟ್ರಪತಿಯವರು ಕಾಲಾವಕಾಶ …ದ್ದಾರೆ. 2-3 ದಿನದಲ್ಲಿ ಮಂತ್ರಿ ಮಂಡಲ ರಚಿಸುವುದಾಗಿ ಸಿಂಗ್ ಹೇಳಿದ್ದಾರೆ**

…ಗಾಗಲೇ ವರದಿಯಾಗಿರುವಂತೆ, …ವ ಒಂದು ಪಕ್ಷವೂ ನಿಚ್ಚಳ ಬಹು… ಪಡೆಯದೆ, ಏಕೈಕ ದೊಡ್ಡ ಪಕ್ಷ… ಕಾಂಗ್ರೆಸ್ ಕೂಡ ಸಂಮಿಶ್ರ ಸರ್ಕಾರ …ಗೆ ಬೇಕಾದಷ್ಟು ಸದಸ್ಯ ಬಲ ಮತ್ತು …ಬಲವನ್ನು ಪಡೆಯಲು ಸಾಧ್ಯವಾಗದೆ …ರ ರಚನೆಯ ಕೋರಿಕೆ ಸಲ್ಲಿಸಲಿಲ್ಲ …ದುದನ್ನು ಇಲ್ಲಿ ಸ್ಮರಿಸಬಹುದು

ಈ ಹಿನ್ನೆಲೆಯಲ್ಲಿ ಬಿಜೆಪಿ ಮತ್ತು ಎಡ …ಗಳ ಬೆಂಬಲದೊಡನೆ ಸರ್ಕಾರ ರಚಿ… ಜನತಾ ದಳ ನೇತೃತ್ವದ ರಾಷ್ಟ್ರೀಯ …ರಂಗ ಸಲ್ಲಿಸಿದ್ದ ಕೋರಿಕೆಯನ್ನು ರಾಷ್ಟ್ರಪತಿ…ಯವರು ಅಂಗೀಕರಿಸಿ, ಜನತಾ ದಳ ಮತ್ತು ರಾಷ್ಟ್ರೀಯ ರಂಗದ ಸಂಸದೀಯ ಪಕ್ಷದ …ನಾಯಕನಾಗಿ ಡಿ 1 ರಂದು ಅಂತಿಮ…ವಾಗಿ ಅವಿರೋಧವಾಗಿ ಆಯ್ಕೆಯಾದ ವಿ. ಪಿ. ಸಿಂಗ್ ಅವರನ್ನು ಸರ್ಕಾರ ರಚಿಸುವಂತೆ ಆಹ್ವಾನಿಸಿದ್ದರು.

86 ಸ್ಥಾನ ಗಳಿಸಿರುವ ಬಿಜೆಪಿ ಹಾಗೂ ಒಟ್ಟಿಗೆ 50 ಸ್ಥಾನ ಗಳಿಸಿರುವ ಎಡ ಪಕ್ಷಗಳು (ಸಿಪಿಎಂ, ಸಿಪಿಐ, ಆರ್ ಎಸ್ ಪಿ ಮತ್ತು ಫಾರ್ವರ್ಡ್ ಬ್ಲಾಕ್) ಸರ್ಕಾರಕ್ಕೆ 'ಹೊರಗಿನಿಂದ' ಬೆಂಬಲ ನೀಡಲು ನಿರ್ಧರಿಸಿವೆ.

## ಕಲ್ಲುಗುಡ್ಡೆಯಲ್ಲಿ ಕಾಂಗ್ರೆಸ್ ವಿಜಯೋತ್ಸವ

ಕಲ್ಲುಗುಡ್ಡೆ : ಶೃಂಗೇರಿ ವಿಧಾನಸಭಾ ಕ್ಷೇತ್ರದ ಕಾಂಗ್ರೆಸ್ ಅಭ್ಯರ್ಥಿ ಯು. ಕೆ. ಶಾ…ಮಣ್ಣನವರ ಪ್ರಚಂಡ ವಿಜಯವನ್ನು ಸ್ವಾಗತಿಸಿ ನ 27ರ ಸಂಜೆ ಇಲ್ಲಿನ ಶಾ…ಲಾ ಮೈದಾನದಲ್ಲಿ, ಸ್ಥಳೀಯ ಕಾಂಗ್ರೆಸ್ ಮುಖಂಡ ಬಿ. ಲಕ್ಷ್ಮೀನಾರಾಯಣಪ್ಪನವರ ನೇತೃತ್ವದಲ್ಲಿ ಗ್ರಾಮಸ್ಥರು ವಿಜಯೋತ್ಸವ ಆಚರಿಸಿದರು.

"ಚುನಾವಣಾ ಪ್ರಚಾರದಲ್ಲಿ ವಿಭಿನ್ನ ಪಕ್ಷಗಳಿಗೆ ಸೇರಿದ ಕಾರ್ಯಕರ್ತರು ಪರಸ್ಪರ ನಿಂದನೆ, ದೂಷಣೆಗಳನ್ನು ಮಾಡಿಕೊಂಡಿರುವುದು ಸಹಜ ಮುಂದೆ ಅದನ್ನೆಲ್ಲಾ ಮರೆತು, ಶಾಸಕ ಶಾಮಣ್ಣನವರಿಗೆ ಸಹಕಾರ ಕೊಟ್ಟು, ಗ್ರಾಮದ ಅಭಿವೃದ್ಧಿಗೆ ಎಲ್ಲರೂ ಒಟ್ಟಾಗಿ ಶ್ರಮಿಸೋಣ" ಎಂದು ಲಕ್ಷ್ಮೀನಾರಾಯಣಪ್ಪ ಕರೆಯಿತ್ತರು. …ನೆರೆಯ ಗ್ರಾಮದ ಕಾಂಗ್ರೆಸ್ ಮುಖಂಡರಾದ …ಬಿ. ವಾಸುದೇವರಾವ್ ಮತ್ತು ಶ್ರೀಕರ ಅವರೂ ಸಭೆಯನ್ನುದ್ದೇಶಿಸಿ ಮಾತನಾಡಿದರು. ಸಿಹಿ ಹಂಚಲಾಯಿತು.

# ಕರ್ನಾಟಕದ 12ನೇ ಮುಖ್ಯ ಮಂತ್ರಿಯಾಗಿ ವೀರೇಂದ್ರ ಪಾಟೀಲ್

**ಕರ್ನಾಟಕದ 12ನೇ ಮುಖ್ಯಮಂತ್ರಿಯಾಗಿ ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ವೀರೇಂದ್ರ ಪಾಟೀಲ್ ನ. 30ರಂದು ರಾಜ್ಯಪಾಲರಿಂದ ಪ್ರಮಾಣವಚನ ಸ್ವೀಕರಿಸಿದರು.**

ಇದಕ್ಕೆ ಮೊದಲು ರಾಜ್ಯ ಕಾಂಗ್ರೆಸ್ ಶಾಸಕಾಂಗ ಪಕ್ಷವು ವೀರೇಂದ್ರಪಾಟೀಲ್ ಅವರನ್ನು ನಾಯಕನಾಗಿ ಅವಿರೋಧವಾಗಿ ಆಯ್ಕೆ ಮಾಡಿತು

"ಇನ್ನು 2-3 ದಿನದಲ್ಲಿ" ಮಂತ್ರಿ ಮಂಡಲ ರಚಿಸುವುದಾಗಿ ತಿಳಿಸಿದ ಪಾಟೀಲರು, ಈ ಬಗ್ಗೆ ಹೈಕಮಾಂಡ್ ಜೊತೆ ಸಮಾಲೋಚನೆಗಾಗಿ ದೆಹಲಿಗೆ ತೆರಳಿದ್ದಾರೆ.

ಪಾಟೀಲರು ಈ ಮೊದಲು 1968ರಿಂದ 1971ರವರೆಗೆ ರಾಜ್ಯದ ಮುಖ್ಯ ಮಂತ್ರಿಯಾಗಿದ್ದುದನ್ನು ಇಲ್ಲಿ ಸ್ಮರಿಸಬಹುದು.

## ಪಿಗ್ಮಿ ಸಂಗ್ರಾಹಕರಿಗೆ ಪ್ರಶಸ್ತಿ

ನ. ರಾ. ಪುರ : ಸಿಂಡಿಕೇಟ್ ಬ್ಯಾಂಕಿನ ಗಡಿಗೇಶ್ವರ ಗ್ರಾಮೀಣ ಬ್ಯಾಂಕಿನ ಪಿಗ್ಮಿ ಸಂಗ್ರಾಹಕರಾದ ಕೆ. ಆರ್. ನಾರಾಯಣ ಭಟ್ ಮತ್ತು ಟಿ ಜಯರಾಂ ಇವರುಗಳಿಗೆ ಗ್ರಾಮೀಣ ಪ್ರದೇಶದಲ್ಲಿ ಅತಿ ಹೆಚ್ಚು ಪಿಗ್ಮಿ ಠೇವಣಿ ಸಂಗ್ರಹಿಸಿದ್ದಕ್ಕಾಗಿ 1988 ನೇ ಸಾಲಿಗೆ ಕಾರವಾರ ಜೋನ್ ವ್ಯಾಪ್ತಿಯ ಮೊದಲ ಮತ್ತು ಎರಡನೇ ಬಹುಮಾನ ಬಂದಿದೆ. ಉಳಿದ 4 ಬಹುಮಾನಗಳು ಗೋವಾಕ್ಕೆ ದಕ್ಕಿವೆ

## ಜಾತ್ಯತೀತ ಸರಳ ವಿವಾಹ

ಶೃಂಗೇರಿ : ಇಲ್ಲಿಗೆ ಸಮೀಪದ ಸಿರಿಮನೆಯ ಗಣೇಶಯ್ಯನವರ ಮಗ ಡಾ|| ಎಸ್. ಜಿ. ಸತ್ಯಮೂರ್ತಿ ಮತ್ತು ಮಂಡ್ಯದ ಪ್ರಶಾಂತ್ ನರ್ಸಿಂಗ್ ಹೋಂನಲ್ಲಿ ಇವರ ಸಹೋದ್ಯೋಗಿಯಾಗಿರುವ ವೀಣಾ(ವಿಟ್ಲದ ಸುಂದರ ರಾಮರವರ ಮಗಳು) ಇವರ ಜಾತ್ಯತೀತ ವಿವಾಹವು ನ. 26 ರಂದು ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲದಲ್ಲಿ ಸರಳವಾಗಿ ನೆರವೇರಿತು.

## ಪದಾಧಿಕಾರಿಗಳು

ಶೃಂಗೇರಿ : ಇಲ್ಲಿನ ಶಾರದಾ ಯುವಕ ಕಲಾ ಸಂಘದ ನೂತನ ಪದಾಧಿಕಾರಿಗಳು: ಬಿ. ಎಲ್. ರವಿಕುಮಾರ್ (ಅಧ್ಯಕ್ಷ), ಎಸ್. ನಿಸ್ಸಾರ್ (ಉಪಾಧ್ಯಕ್ಷ), ಪ್ರಭಾಕರ ಅಡಿಗ (ಕಾರ್ಯದರ್ಶಿ), ರಾಮಚಂದ್ರ (ಸಹ ಕಾರ್ಯದರ್ಶಿ), ಅಶೋಕ್ ಕುಮಾರ್ (ಸಂ| ಕಾರ್ಯದರ್ಶಿ), ವೆಂಕಟೇಶ್ (ಖಜಾಂಚಿ) ಮತ್ತು 7 ಮಂದಿ ಕಾರ್ಯಕಾರಿ ಸದಸ್ಯರು.

### ಜಿಲ್ಲಾ ಪ್ರೌಢಶಾಲಾ ಕ್ರೀಡಾ ಕೂಟ : ತಲಾ 10,000 ರೂ. ನಗದು ಬಹುಮಾನದೊಂದಿಗೆ

# ಕೊಪ್ಪ, ಕಮ್ಮರ್ಡಿ ಕಿರಿಯ ಕಾಲೇಜುಗಳ ದಿಗ್ವಿಜಯ

ಕೊಪ್ಪ : ನ. ರಾ. ಪುರದಲ್ಲಿ ನ. 28 ರಿಂದ 30 ರವರೆಗೆ ನಡೆದ ಜಿಲ್ಲಾ ಮಟ್ಟದ ಪ್ರೌಢ ಶಾಲೆಗಳ ಕ್ರೀಡಾ ಕೂಟದಲ್ಲಿ ಕೊಪ್ಪದ ಸರ್ಕಾರಿ ಕಿರಿಯ ಕಾಲೇಜು ವಿದ್ಯಾರ್ಥಿಗಳು ಆಟೋಟದಲ್ಲಿ(ಅಥ್ಲೆಟಿಕ್ಸ್) ಜಿಲ್ಲೆಯ ಸುಮಾರು 150 ಶಾಲೆಗಳ ಪೈಕಿ ಮೊದಲ ಸ್ಥಾನ ಪಡೆದು ಶಾಲಾ ಪ್ರಶಸ್ತಿಯನ್ನು ಗೆದ್ದುದೇ ಅಲ್ಲದೆ, ಕೇಂದ್ರ ಸರ್ಕಾರದ 10 ಸಾವಿರ ರೂ. ನಗದು ಬಹುಮಾನವನ್ನೂ ಶಾಲೆಗೆ ಗೆದ್ದುಕೊಟ್ಟರು.

ಕಮ್ಮರಡಿಯ ಕಿರಿಯ ಕಾಲೇಜು ಬಾಲಕಿಯರು ವಾಲಿಬಾಲ್‌ನಲ್ಲಿ ಮೊದಲ ಸ್ಥಾನ ಗಳಿಸಿ, ಈ ಬಹುಮಾನವನ್ನು 2ನೇ ಬಾರಿ ಗೆದ್ದರು.

ಕ್ರೀಡಾ ಪ್ರಗತಿಗಾಗಿ ಕಳೆದ 3 ವರ್ಷಗಳಿಂದ ಕೇಂದ್ರ ಸರ್ಕಾರ ನೀಡುತ್ತಿರುವ ಈ ನಗದು ಬಹುಮಾನವನ್ನು ಅಥ್ಲೆಟಿಕ್ಸ್, ವಾಲಿಬಾಲ್, ಫುಟ್‌ಬಾಲ್, ಹಾಕಿ ಮತ್ತು ಬ್ಯಾಸ್ಕೆಟ್ ಬಾಲ್ ಗಳಲ್ಲಿ ಜಿಲ್ಲೆಗೆ ಮೊದಲ ಸ್ಥಾನ ಪಡೆಯುವ ಶಾಲೆಗೆ ಕ್ರೀಡಾಂಗಣ ನಿರ್ಮಾಣ ಅಥವಾ ಕ್ರೀಡಾ ಉಪಕರಣಗಳನ್ನು ಕೊಳ್ಳುವ ಸಲುವಾಗಿ ನೀಡಲಾಗುತ್ತಿದೆ.

ಕೊಪ್ಪ ಕಿರಿಯ ಕಾಲೇಜು ಬಾಲಕಿಯರು ಅಥ್ಲೆಟಿಕ್ಸ್‌ನಲ್ಲಿ 2 ನೇ ಸ್ಥಾನ ಪಡೆದರು.

ಕೊಪ್ಪ ಕಾನ್ವೆಂಟ್ ಶಾಲೆಯ ಬಾಲಕಿಯರು ಶಟಲ್ ಕಾಕ್ ಮತ್ತು ಬಾಲ್ ಬ್ಯಾಡ್‌ಮಿಂಟನ್‌ಗಳಲ್ಲಿ ಪ್ರಥಮ ಸ್ಥಾನ ಗಳಿಸಿ ರಾಜ್ಯ ಕ್ರೀಡೆಗೆ ಆಯ್ಕೆಯಾದರೆ, ನಾರ್ವೆ ಮತ್ತು ಕುದುರೆಗುಂಡಿ ಶಾಲೆಯಿಂದ ತಲಾ ಒಬ್ಬ ಬಾಲಕ ಮತ್ತು ಬಾಲಕಿಯೂ, ಬಸರೀಕಟ್ಟೆ ಮತ್ತು ಕೊಪ್ಪ ಕಾನ್ವೆಂಟ ನಿಂದ ತಲಾ ಒಬ್ಬೊಬ್ಬ ಬಾಲಕನೂ ರಾಜ್ಯ ಮಟ್ಟದ ಕೂಟಕ್ಕೆ ಆಯ್ಕೆಯಾಗಿದ್ದಾರೆ (ವರದಿ: ಹ ಅ. ಗೋಪಾಲ್)

# ಕಾರವಾರ ಕ್ಷೇತ್ರದಲ್ಲಿ ಡಾ॥ ಶಿವರಾಮ ಕಾರಂತರ ಸ್ಪರ್ಧೆ

## —ಪ್ರಚಾರಕ್ಕೆ ತೆರಳಿದ್ದ ಪರಿಸರ ಕಾರ್ಯಕರ್ತರ ಅನುಭವ-ಅನ್ನಿಸಿಕೆಗಳು

**ಕೊಪ್ಪದ** ಆಯುರ್ವೇದ ಕಾಲೇಜಿನ 6 ಜನ ವಿದ್ಯಾರ್ಥಿಗಳು ಸೇರಿದಂತೆ ಕೊಪ್ಪ ತಾ॥ ಪರಿಸರ ಜಾಗೃತಿ ವೇದಿಕೆಯ ವತಿಯಿಂದ 9 ಜನ ಕಾರ್ಯಕರ್ತರು ಕಾರವಾರ ಲೋಕ ಸಭಾ ಕ್ಷೇತ್ರದಲ್ಲಿ ಪರಿಸರ ವೇದಿಕೆಯಿಂದ ಸ್ಪರ್ಧಿಸಿದ್ದ ಡಾ॥ ಶಿವರಾಮ ಕಾರಂತರ ಪರವಾಗಿ ಪ್ರಚಾರ ಮಾಡಲು ಶಿರಸಿಗೆ ತೆರಳಿದ್ದರು.

ಎರಡು ದಿನ ಅಲ್ಲಿದ್ದು ಪ್ರಚಾರ ನಡೆಸಿದ ವೇಳೆ ತಮಗಾದ ಅನುಭವಗಳನ್ನು ತಂಡದ ಪರವಾಗಿ ನಮ್ಮ ಓದುಗರೊಂದಿಗೆ ಹಂಚಿಕೊಂಡಿದ್ದಾರೆ—

**ವಸಂತ ಕುಮಾರ್ ಹರ್ಡೀಕರ್ ಮತ್ತು**
**ಎಚ್. ಭುಜಂಗ ರಾವ್.**

ಕರ್ನಾಟಕದ ಕೆನರಾ (ಕಾರವಾರ) ಲೋಕ ಸಭಾ ಕ್ಷೇತ್ರ ಕಳೆದ ತಿಂಗಳು ಇಡೀ ದೇಶದ ಪ್ರಜ್ಞಾವಂತರ ಗಮನವನ್ನು ತನ್ನೆಡೆಗೆ ಸೆಳೆದು ಕೊಂಡಿತ್ತು. ಕಾರಣ, ತನ್ನ ಸರ್ವಸ್ವವನ್ನೂ ಮಾನವತೆಯ ಒಳಿತಿಗಾಗಿಯೇ ಧಾರೆಯೆರೆದಿರುವ ಕನ್ನಡದ ಜ್ಞಾನಪೀಠ ಪ್ರಶಸ್ತಿ ವಿಜೇತ ಸಾಹಿತಿ, 'ಕಡಲ ಕರೆಯ ಭಾರ್ಗವ' ಡಾ॥ ಶಿವರಾಮ ಕಾರಂತರು ದೇಶದಲ್ಲಿಯೇ ಪ್ರಪ್ರಥಮವಾಗಿ ಪರಿಸರ ಪ್ರೇಮಿಗಳೆಲ್ಲರ ಪರವಾಗಿ ಉತ್ತರ ಕನ್ನಡದ 'ಪರಿಸರ ಸಂರಕ್ಷಣಾ ಸಮಿತಿ'ಯ ವತಿಯಿಂದ ಚುನಾವಣಾ ಕಣಕ್ಕೆ ಧುಮುಕಿದ್ದುದು.

ನವೆಂಬರ್ 11 ರ ಶುಕ್ರವಾರ ಬೆಳಿಗ್ಗೆ ನಾವುಗಳು ಕೊಪ್ಪದಿಂದ ಹೊರಟು ಮಧ್ಯಾಹ್ನ ಶಿರಸಿ ತಲುಪಿದಾಗ ಅಲ್ಲಿನ 'ಸ್ಪಂದನ ವೇದಿಕೆ' ಯಲ್ಲಿ ಉತ್ಸಾಹಿ ವಕೀಲ ನರೇಂದ್ರ ಹೆಗಡೆ ನಮ್ಮನ್ನು ಎದುರುಗೊಂಡು, ನಮಗೆ ಕಾರ್ಯಕ್ರಮ ರೂಪಿಸಿಕೊಟ್ಟರು.

ಕೂಡಲೇ ನಾವು, ಪರಿಸರ ಚಳುವಳಿಯ ಮೊದಲ ಪಂಕ್ತಿಯ ಒಬ್ಬ ಕಾರ್ಯಕರ್ತರೂ, ವೈಜ್ಞಾನಿಕ ಲೇಖನಗಳಲ್ಲಿ ನಿಸ್ಸೀಮರೂ ಆದ ಯುವ ಪತ್ರಕರ್ತ ನಾಗೇಶ್ ಹೆಗಡೆಯವರ ನೇತೃತ್ವದಲ್ಲಿ ಇನ್ನಿತರ ಗೆಳೆಯರೊಂದಿಗೆ ಕೂಡಿಕೊಂಡು ಅಲ್ಲಿನ ಗಣೇಶ ನಗರದ ಮನೆ ಮನೆಗೂ ಹೋಗಿ ಪ್ರಚಾರ ಆರಂಭಿಸಿದೆವು. ನಮ್ಮೊಂದಿಗೆ ಪರಿಸರ ಕಾರ್ಯಕರ್ತೆ ಶ್ರೀಮತಿ ಮಹಾದೇವಮ್ಮನವರ ನೇತೃತ್ವದಲ್ಲಿ ಕೆಲ ಮಂದಿ ಮಹಿಳೆಯರೂ ಇದ್ದರು.

ಅಲ್ಲಿನ 150 ಕ್ಕೂ ಹೆಚ್ಚು ಕುಟುಂಬಗಳಲ್ಲಿ ಮಧ್ಯಮ ಮತ್ತು ಬಡ ವರ್ಗದವರೇ ಹೆಚ್ಚು. ಹಿಂದಿನ ರಾಜಕಾರಣಿಗಳ ನಿರ್ಲಕ್ಷ್ಯದ ಕಾರ್ಯವೈಖರಿಗೆ ಬೇಸತ್ತಿದ್ದ ಇಲ್ಲಿನ ಜನ ಬದಲಾವಣೆಗೆ ತುಡಿಯುತ್ತಲೂ ಚುನಾವಣೆಗಳ ಬಗ್ಗೆ ತಿರಸ್ಕಾರ ತಾಳಿದ್ದು ಎದ್ದು ಕಾಣುತ್ತಿತ್ತು. ಆದರೂ ತಮ್ಮ ಬವಣೆಗಳ ಬಗ್ಗೆ ಪ್ರಶ್ನಿಸಿ ಉತ್ತರ ತಿಳಿಯುವ ಹಂಬಲ, ಕೆಚ್ಚು ಅವರಲ್ಲಿದ್ದುದು ಒಂದು ಉತ್ತಮ ಅಂಶ.

ಉತ್ತರ ಕನ್ನಡದಲ್ಲಿ ಅಬ್ಬರದ ಕಾರು-ಮೈಕು ಪ್ರಚಾರಕ್ಕಿಂತ ಮನೆ ಮನೆಗೆ ಹೋಗಿ ಓಟು ಕೇಳುವುದೇ ಸರ್ವತ್ರ ರೂಢಿ. ಆದರೆ ಈ ಪ್ರದೇಶಕ್ಕೆ ನಾವೇ ಮೊದಲ ತಂಡವಾಗಿದ್ದರಿಂದ, ಈವರೆಗಿನ ಆಡಳಿತಗಾರರ ವೈಫಲ್ಯದ ಬಗೆಗಿನ ಅವರ ಆಕ್ರೋಶವೆಲ್ಲ ನಮ್ಮ ಮೇಲೇ ಹರಿದು ಬಂದಿತು. ಅಲ್ಲಿನವರ ಮೂಲ ಮಂತ್ರ 'ನೀರು'! "ನಮಗೆ ಕರೆಂಟ್ ಬೇಡ, ಹೆಂಚಿನ ಮನೆ ಬೇಡ. ಆದರೆ ನೀರು ಮಾತ್ರ ಬೇಕೇ ಬೇಕು" ಎಂದ ಮನೆಯೊಡತಿಯೊಬ್ಬರು ತಾವೊಂದು 25 ಜನ ಮಹಿಳೆಯರು ಚುನಾವಣೆಗೆ ಬಹಿಷ್ಕಾರ ಹಾಕಿರುವುದಾಗಿ ತಿಳಿಸಿದರು.

ಆದರೆ ನಮ್ಮ ತಂಡದ ಸಮರ್ಥ ಕಾರ್ಯಕರ್ತರು ಆಕೆಗೆ ನಾವು ಯಾವುದೇ ರಾಜಕೀಯ ಪಕ್ಷದವರಾಗಿರದೆ ಪರಿಸರ ವೇದಿಕೆಯ ಕಾರ್ಯಕರ್ತರೆಂಬುದನ್ನು ತಿಳಿಸಿ, ನಾಳೆ ಕುಡಿಯುವ ನೀರು ಸಿಗುವುದು ಹಾಗಿರಲಿ, ಸೇವಿಸುವ ಗಾಳಿಯೂ ವಿಷವಾದೀತೆಂಬ ಕಟು ಸತ್ಯವನ್ನು ತಿಳಿಸಿ ಹೇಳಿದಾಗ ಅವರಿಗೆಲ್ಲ ಮನವರಿಕೆಯಾಯಿತು. ಇಂಥ ಪ್ರಾಥಮಿಕ ಅವಶ್ಯಕತೆಯನ್ನೂ ಪೂರೈಸಲಾರದ ವೃತ್ತಿ ನಿರತ ರಾಜಕಾರಣಿಗಳು ಜನ ಸಮೂಹವನ್ನೇ ನಾಶ ಮಾಡುವ ಯೋಜನೆಗಳ ಬಗ್ಗೆ ತೀವ್ರ ಆಸಕ್ತಿ ವಹಿಸುವುದು ಆಶ್ಚರ್ಯಕರ.

ಶನಿವಾರ ಬೆಳಿಗ್ಗೆ ಹೊನ್ನಾವರದ ಬಳಿಯ ಕಾಸರಕೋಡಿನ 'ಸ್ನೇಹ ಕುಂಜ'ಕ್ಕೆ ಬಸ್ಸಿನಲ್ಲಿ ಪ್ರಯಾಣ. ಪ್ರಯಾಣದಲ್ಲಿ ಸಿಕ್ಕ ತಾಂತ್ರಿಕ ವಿದ್ಯಾರ್ಥಿಯೊಬ್ಬನಿಗೆ, "ಕಾರಂತರ ಬಗ್ಗೆ ಅಭಿಮಾನವಿದೆ. ಆದರೆ ಕೈಗಾವನ್ನು ವಿರೋಧಿಸಲಾರೆ" ಎಂಬ ಉಭಯ ಸಂಕಟ. ಕಾರಂತರ ಅಭಿಮಾನಿಯೊಬ್ಬರು ಹೊನ್ನಾವರದಲ್ಲಿ ನಮ್ಮ ಪರದಾಟ ಕಂಡು, ನಮ್ಮನ್ನು ತಮ್ಮ ಜೀಪಿನಲ್ಲಿ ಅಲ್ಲಿಂದ ಸ್ನೇಹಕುಂಜಕ್ಕೆ ತಲುಪಿಸಿದರು.

ಅಲ್ಲಿನ ಕಾರ್ಯಕರ್ತ ಡಾ॥ ಸವಣೂರ್. ಈ ಕಾರ್ಯಕ್ಕಾಗಿ ಇಷ್ಟು ದೂರ ಬಂದ ನಮ್ಮ ಬಗ್ಗೆ ತುಂಬ ಸಂತಸಪಟ್ಟರು. ಅಲ್ಲಿನ ಕೆಲ ಗೆಳೆಯರೊಂದಿಗೆ ಹೊನ್ನಾವರ ಪೇಟೆಯಲ್ಲಿ ಸೈಕಲ್ ಜಾಥಾ ಹೊರಟೆವು ಅಲ್ಲಿನ ಎಸ್ ಡಿ.ಎಂ. ಕಾಲೇಜಿನ ಪ್ರಿನ್ಸಿಪಾಲರು, ಅಧ್ಯಾಪಕ ವರ್ಗ ಮತ್ತು ವಿದ್ಯಾರ್ಥಿ ವೃಂದ ಹಾಗೂ ಪೇಟೆಯ ವರ್ತಕ ವೃಂದ ಕೂಡ ಕಾರಂತರ ಬಗ್ಗೆ ಒಲವು ತೋರಿದರು.

ಆದರೆ ಅನಕ್ಷರಸ್ಥರು, ಬಡ ವರ್ಗಗಳಲ್ಲಿ ಕಾರಂತರ ಬಗ್ಗೆ ಅರಿವಿಲ್ಲದಿರುವುದು ಎದ್ದು ಕಂಡಿತು. ಹೊನ್ನಾವರದಲ್ಲಿ ಶರಾವತಿ ನದಿಯ ಸುತ್ತು-ಬಳಸುಗಳ ನಡುವೆ ಹರಡಿಕೊಂಡಿರುವ ಜನವಸತಿಗಳಲ್ಲಿ ಮೋಟಾರ್

(3ನೇ ಪುಟಕ್ಕೆ)

**ಪದ್ಯದಂಗಳ**

### ನಾರುವ ಹಣ್ಣುಗಳು

ಬಜಾರಿಗೆ ಬಂದಿರುವ
ಕೆಟ್ಟವುಗಳಲ್ಲಿ
ಒಳ್ಳೆಯ ಹಣ್ಣನ್ನು
ಆರಿಸಿಕೊಳ್ಳೋಣವೆಂದರೆ,
ಒಂದಕ್ಕಿಂತ ಒಂದು
ಕಂಠಪೂರ್ತಿ ನಾರುತ್ತಿದೆ
ತೆಪ್ಪಗಿರೋಣವೆಂದರೆ,
(ಮತಚೋರನಾಗೋಣವೆಂದರೆ)
ಮತಿಚೋರರು
ಆತಿ ಕೆಟ್ಟ ಹಣ್ಣಿಗೆ
ಛತ್ರಿ-ಚಾಮರ
ಹಿಡಿದಾರೆಂಬ ಭಯ

**-ಎಲೆತೋಟದಹಳ್ಳಿ ಪ್ರಭುಸ್ವಾಮಿ**
('ಆಂದೋಲನದಿಂದ')



### ವಿಮಾನ ಬಂತು !

ಓ ಅಜ್ಜ, ಓಡಿ ಬಾ, ಬೇಗ ಬಾ
ವಿಮಾನ ಬಂತು ನೋಡು ಬಾ
ಅಜ್ಜ, ಅಜ್ಜ ಓಡಿ ಬಾ, ಬೇಗ ಬಾ
ಮೇಲೆ ಹಾರುತಿಹುದು ನೋಡು ಬಾ.

ನೀಲಿಯ ಬಾನಲ್ಲಿ, ಮೋಡಗಳ ಮರೆಯಲ್ಲಿ
ತೇಲುತಿಹುದು ನೋಡು ಬಾ
ಸರ್, ಸರ್ ಗಾಳಿಯಂತೆ
ಹಾರುತಿಹುದು ನೋಡು ಬಾ.

ಬೊಂಬಾಯಿಂದ ದಿಲ್ಲಿಗೊ ಎಲ್ಲಿಗೋ
ಹಾರುತಿಹುದು ನೋಡು ಬಾ
ಬಾನಿನಲಿ ಚುಕ್ಕಿಯಂತೆ
ತೇರುತಿಹುದು ನೋಡು ಬಾ.

ಅಜ್ಜ ಓಡಿ ಬಾ, ಬೇಗ ಬಾ
ಹಕ್ಕಿಯಂತೆ ಕಾಣುತಿಹುದು
ನೋಡು ಬಾ
ಅಜ್ಜ, ಅಜ್ಜ ಓಡಿ ಬಾ ಬೇಗ ಬಾ
ಹಕ್ಕಿಯಂತೆ ಮೋಡದಾಚೆ
ಮರೆಯಾಗುತಿದೆ ನೋಡು ಬಾ
ಮರೆಯಾಯ್ತು, ಮರೆಯಾಯ್ತು !
ಅಜ್ಜ, ಅಜ್ಜ ಓಡಿ ಬಾ ಬೇಗ ಬಾ
ಮೋಡದಾಚೆ ತೇಲಿ ಹೋಯ್ತು,
ನೋಡು ಬಾ, ಬೇಗ ಬಾ

—ಎಂ. ಜಿ. ಪಿಳೆ.

## ಪಂಡಿತ ಕಲಿತ ಪಾಠ

ಒಮ್ಮೆ ಒಬ್ಬ ನವ ಯುವಕ ಎಲ್ಲಿಗೋ ಪ್ರಯಾಣ ಹೊರಟಿದ್ದ. ನಡೆದು ದಣಿವಾದಾಗ, ದಾರಿಯ ಬದಿ ವಿಶಾಲವಾಗಿ ನೆರಳು ಹಾಸಿದ್ದ ಮರವೊಂದರ ಕೆಳಗೆ ಮಲಗಿ ವಿಶ್ರಮಿಸಿಕೊಳ್ಳತೊಡಗಿದ.

ಹಾಗೇ ಜೊಂಪು ಹತ್ತಿದ್ದಾಗ ಮರದ ಮೇಲಿದ್ದ ಹಕ್ಕಿಗಳೆರಡು ತನ್ನ ಬಗೆಗೇ ಮಾತಾಡಿಕೊಳ್ಳುತ್ತಿರುವುದು ಅವನಿಗೆ ಕೇಳಿಸಿತು ಅವನು ಕಿವಿ ನಿಮಿರಿಸಿದ.

ಗಂಡು ಹೇಳಿತು—ಯಾರೋ ಮಹಾ ವಿದ್ವಾಂಸನಂತೆ ಕಾಣುತ್ತಾನೆ. ಸಜ್ಜನನೂ ಆಗಿರಬಹುದು ಮದುವೆಯಾಗಲು ತಕ್ಕ ಕನ್ಯೆಯನ್ನು ಹುಡುಕಿಕೊಂಡು ಹೊರಟಿರುವಂತೆ ಕಾಣುತ್ತದೆ.

ಹೆಣ್ಣು ಎಂದಿತು—ಆಹಾ! ಈ ಮನ್ಮಥನ ಕೈ ಹಿಡಿಯಲು ಅದಾವ ರತಿ ಕಾದಿದ್ದಾಳೋ ಕಾಣೆ !

ನವ ಯುವಕ ಯೋಚಿಸಿದ. ಹೌದು, ನಾನೊಬ್ಬ ಪರಿಪೂರ್ಣ ವಿದ್ಯಾವಂತ. ಉತ್ತಮ ಕುಲದ ಸಜ್ಜನ, ಸುಂದರಾಂಗನೂ ಹೌದು. ಇಂಥವನಿಗೆ ಹೆಣ್ಣು ಕೊಡಲು ಯಾರಾದರೂ ಕಾತರಿಸುವುದೇ. ಹಾಗಿರುವಾಗ, ಮದುವೆಯಾಗಲು ನಾನೇಕೆ ಯಥೇಚ್ಛವಾಗಿ ಧನ ಕನಕ ಸಂಪತ್ತುಗಳನ್ನು ಭಾವೀ ಮಾವನಿಂದ ಕೇಳಬಾರದು?

ಅವನ ಯೋಚನೆಯನ್ನು ಗ್ರಹಿಸಿದ ಪಕ್ಷಿ ಹೇಳಿತು—ಅಗೋ ನೋಡು. ಇವನೆಂಥ ಅಯೋಗ್ಯ ! ಎಷ್ಟು ವಿದ್ವಾಂಸನಾಗಿ ಏನು ಬಂತು ? ತನ್ನ ರೂಪ, ಯೌವನ, ಪಾಂಡಿತ್ಯಗಳನ್ನು ಮಾರಾಟಕ್ಕಿಡಲು ಯೋಚಿಸುತ್ತಿದ್ದಾನಲ್ಲ. ಇಂಥವನಿಗೆ ತನ್ನ ಮಡದಿಯಾಗುವವಳ ಸಂಪತ್ತಿನ ಹೊರತು ಅವಳ ಗುಣ-ದೋಷಗಳನ್ನರಿಯಲು ಹೇಗೆ ಸಾಧ್ಯವಾದೀತು ?

ಹೆಣ್ಣು ನುಡಿಯಿತು—'ನಿಜ ನಿಜ. ಇಂಥ ಅಲ್ಪನಿಗೆ ತಕ್ಕ ಬುದ್ಧಿ ಕಲಿಸಲು ಯಾವ ಶೂರ್ಪನಖಿ ಕಾದಿದ್ದಾಳೋ !

ಯುವಕ ಧಿಗ್ಗನೆದ್ದ. ಛೆ! ತಾನೆಂಥ ಮೂರ್ಖನಾಗಿಬಿಟ್ಟಿದ್ದೆ ಎಂದು ಅವನಿಗೆ ನಾಚಿಕೆಯಾಯಿತು. ತನ್ನ ಗುಣ-ದೋಷಗಳನ್ನು ತನ್ನೆದುರೇ ತೆರೆದಿಟ್ಟು ತನಗೆ ದಾರಿ ತೋರಿದ ಆ ಪುಟ್ಟ ಹಕ್ಕಿ ಜೋಡಿಗೆ ಮನದಲ್ಲೇ ಕೃತಜ್ಞತೆ ಸೂಚಿಸಿ, ಪ್ರಯಾಣ ಮುಂದುವರಿಸಿದ.

### ದುಂಬಿ

ಹೂವಿನಿಂದ ಹೂವಿಗೆ ಹಾರುತಿತ್ತು ದುಂಬಿ
ಎಲ್ಲರ ಮನದಲ್ಲಿ ನೆಲೆಸಿತ್ತು ದುಂಬಿ
ಹೂವಿನ ಸೌಂದರ್ಯ ಸವಿಯುತಿತ್ತು ದುಂಬಿ
ಹೂವಿನ ತೊಳಲನ್ನು ಅರಿಯುತಿತ್ತು ದುಂಬಿ
ಎಲ್ಲರ ಮನಕ್ಕೂ ಆನಂದ ತರುತಿತ್ತು ದುಂಬಿ
ಹೂವಿನ ಮಕರಂದವನ್ನು ಹೀರುತಿತ್ತು
ದುಂಬಿ
ಹೂವಿನಿಂದ ಹೂವಿಗೆ ಹಾರುತಿತ್ತು ದುಂಬಿ

**ಜುಬೇದಾ,**
10ನೆಯ ತರಗತಿ, ಕೊಪ್ಪ

# ಕಾರವಾರದಲ್ಲಿ ಶಿವರಾಮ ಕಾರಂತರ ಸ್ಪರ್ಧೆ

(2ನೇ ಪುಟದಿಂದ)

ದೋಣಿಯ ಮೂಲಕ ಸಂಚರಿಸಿ, ಸುಮಾರು 2 ಗಂಟೆಗೂ ಹೆಚ್ಚು ಹೊತ್ತು ಪ್ರಚಾರ ನಡೆಸಿದೆವು. ಹಾಗೆಯೇ ಬೆಸ್ತರ ವಸತಿಗಳಲ್ಲಿ ಕಾಂಗ್ರೆಸ್ ಹೊರತು ಬೇರೆ ಪಕ್ಷದವರು ಪ್ರಚಾರಕ್ಕೆ ಹೋಗುವುದು ಅಪಾಯಕರವೆಂದು ನಮಗೆ ಕೆಲವರು ಹೇಳಿದರೂ ನಾವು ಅಲ್ಲಿಗೂ ಹೋದೆವು ಕಾರವಾರದ ಉದ್ದೇಶಿತ ನೌಕಾನೆಲೆ ಮತ್ತು ಕೈಗಾ ಅಣುಸ್ಥಾವರದಂಥ ಯೋಜನೆಗಳಿಗಾಗಿ ತಮ್ಮ ಸರ್ವಸ್ವ ಕಳೆದುಕೊಳ್ಳಲಿರುವ ಈ ಜನಾಂಗದವರಿಗೆ ಪರಿಸರದ ಉಳಿವಿನ ಬಗ್ಗೆ ಅರ್ಥವಾಗುವುದು ಕಷ್ಟವಾಗಲಿಲ್ಲ.

ಕಾರಂತರ ಬಗ್ಗೆ ಅಪಪ್ರಚಾರ, ಪುಕಾರುಗಳನ್ನು ಕೂಡ ಹಬ್ಬಿಸಿರುವುದು ನಮಗೆ ಕಂಡು ಬಂತು. "ಕಾರಂತರಿಗೆ ಸೌಖ್ಯವಿಲ್ಲ. ಅದಕ್ಕೇ ಅಮೆರಿಕಕ್ಕೆ ಹೋಗಿದ್ದಾರೆ. ಈ ವಯಸ್ಸಿನಲ್ಲಿ ಅವರಿಗೇಕೆ ಚುನಾವಣೆ ?"; "ಅವರು ಈ ಜಿಲ್ಲೆಯವರಲ್ಲ" ಮುಂತಾದ ತಪ್ಪು ಕಲ್ಪನೆಗಳ ಜೊತೆ ಒಬ್ಬ ವಕೀಲರು "ಕಾರಂತರಿಗೆ ಹುಚ್ಚು" ಎಂಬ ಪ್ರಚಾರ ಕೂಡ ನಡೆಸಿದ್ದು ಅರಿವಾಗುತ್ತಿತ್ತು.

ಪರಿಸರವಾದಿಗಳ ಪಾಲಿಗೆ, ಕಾರಂತರ ಪರ ಪ್ರಚಾರ ಕಾರ್ಯ ಮತ್ತೊಂದು ವಿಪರೀತ ಕಲ್ಲು-ಮುಳ್ಳಿನ ಹಾದಿಯೇ ಸರಿ. ಆದಾಗ್ಯೂ ಉತ್ತರ ಕನ್ನಡ, ಶಿವಮೊಗ್ಗ ಮಾತ್ರವಲ್ಲದೆ ದೂರ ದೂರದ ಊರುಗಳಿಂದಲೂ ಬೆಂಬಲ, ಸಹಾಯ ಹಸ್ತ ಸಿಕ್ಕಿತ್ತು. ಖ್ಯಾತ ಗಾಂಧಿವಾದಿಗಳಾದ ದೊರೆಸ್ವಾಮಿ, ಹಿರೇಮಠ್, ಪತ್ರಕರ್ತರಾದ ನಾಗೇಶ್ ಹೆಗಡೆ, ಎಸ್. ಆರ್. ರಾಮಸ್ವಾಮಿ, ಚಿತ್ರ ನಟರಾದ ಸುರೇಶ್ ಹೆಬ್ಳೀಕರ್, ಅಶೋಕ್ ಮುಂತಾದವರ ಮಾರ್ಗದರ್ಶನದಲ್ಲಿ ಪರಿಸರ ಕಾರ್ಯಕರ್ತರು ಹಗಲಿರುಳು ಪ್ರಚಾರ ಕಾರ್ಯ ನಡೆಸಿದರು.

ಇಂಥ ಪ್ರಚಾರ, ಬಿಜೆಪಿಯ ಪೂರ್ಣ ಬೆಂಬಲ, ಬುದ್ಧಿ ಜೀವಿ ವರ್ಗದ ಒಲವು ಇವುಗಳ ಜೊತೆಗೆ ಪ್ರಬಲ ಪಕ್ಷಗಳೊಳಗಿನ ಮುಸುಕಿನ ಗುದ್ದಾಟ — ಇವುಗಳಿಂದಾಗಿ ಒಂದು ವೇಳೆ ಕಾರಂತರು ಗೆದ್ದರೂ ಗೆಲ್ಲಬಹುದು ಆದರೂ ರಾಜಕೀಯದಲ್ಲಿ ಕೊನೆ ಘಳಿಗೆಯವರೆಗೆ ಏನೂ ಹೇಳುವುದು ಕಷ್ಟ. ಕಾರಂತರು ಗೆದ್ದರೆ ಅದ ಈ ನಾಡಿನ ಪ್ರಕೃತಿಯ ಜಯ ಅವರು ಸೋತರೂ ಅದು ಅವರ ಸೋಲಲ್ಲ ಅಥವಾ ಕೇವಲ ಪರಿಸರ ಚಳುವಳಿಯ ಸೋಲಲ್ಲ; ಅದು ಭವಿಷ್ಯದಲ್ಲಿ ಭೀಕರ ಪರಿಣಾಮಗಳಿಗೆ ನಾಂದಿ—ಎಂಬಂಥ ಮಿಶ್ರ ಭಾವನೆಗಳ ತಾಕಲಾಟದೊಂದಿಗೆ ನಮ್ಮ ಪ್ರವಾಸ ಮುಗಿಸಿ ವಾಪಸಾದೆವು

ಆದರೂ, ಕಾರಂತರು ಈ ಹೊತ್ತು ಇಲ್ಲೇ ಇರುತ್ತಿದ್ದರೆ ಹಾಗೂ ಪ್ರಚಾರಕ್ಕೆ ಕಾರ್ಯಕರ್ತರು ಮತ್ತು ಇತರ ಸೌಕರ್ಯಗಳು ಇನ್ನೂ ಸಾಕಷ್ಟು ಇರುತ್ತಿದ್ದರೆ ಪರಿಸರ ಚಳುವಳಿಯು ಈ ಒಂದು ಹೊಸ ಆಯಾಮ—ಸಂಸದೀಯ 'ವೇದಿಕೆಯನ್ನು ಬಳಸಿಕೊಳ್ಳುವ ಚೊಚ್ಚಲ ಯತ್ನ— ಇನ್ನಷ್ಟು ಶಕ್ತಿಯುತವಾಗುತ್ತಿತ್ತು ಅನ್ನಿಸದೆ ಇರಲಿಲ್ಲ. ○

### ಕಾರಂತರ ವರ್ಣ ಚಿತ್ರ

ನಮ್ಮ ತಂಡದ ಸದಸ್ಯ, ಆಯುರ್ವೇದ ಕಾಲೇಜು ವಿದ್ಯಾರ್ಥಿ ಎ. ಎಸ್. ಸತೀಶ್ ರಚಿಸಿದ್ದ ಸುಮಾರು 18"X15" ಅಳತೆಯ ಜಲವರ್ಣ ಚಿತ್ರವೊಂದನ್ನು ನಾಗೇಶ್ ಹೆಗಡೆ ಮತ್ತಿತರರು ಅಪಾರವಾಗಿ ಮೆಚ್ಚಿಕೊಂಡು, ಅದನ್ನು ತಮ್ಮ ಪ್ರಚಾರ ವಾಹನದ ಮುಂಭಾಗದಲ್ಲಿ ಕಟ್ಟಿ ಹಾಕಿಸಿಟ್ಟುಕೊಳ್ಳಲು ತೆಗೆದುಕೊಂಡರು. ಅದರ ಹಲವು ಜೆರಾಕ್ಸ್ ಪ್ರತಿಗಳನ್ನೂ ಮಾಡಿಸಿದರು.

ಆ ಚಿತ್ರದಲ್ಲಿ, ತಿಳಿ ನಗು ಮುಖದ ಕಾರಂತರು ಕೈಲಿ ಹಿಡಿದ ಪೆನ್ನಿನ ಹಿಂಭಾಗ ಚಿಗುರಿ ಗಿಡವಾಗಿ ಮರವಾಗಿದೆ ಮುಂಭಾಗದಲ್ಲಿ ಅಕ್ಷರಗಳು ಆನೆಗಳ ಆಕಾರವಾಗುತ್ತ ಆನೆಗಳೇ ಆಗಿ ಮುಂದೆ ಹೋಗಿ, ಅಣುಸ್ಥಾವರವೊಂದನ್ನು ಸೊಂಡಿಲಿನಿಂದ ಸುತ್ತಿ ಜಗ್ಗುತ್ತಿವೆ. (ಕಾರಂತರ ಚುನಾವಣಾ ಚಿಹ್ನೆ 'ಆನೆ')

## ಕೆಲವು ಕರ ಪತ್ರಗಳು

ಕಾರಂತರನ್ನು ಬೆಂಬಲಿಸಿ ವಿವಿಧ ಕಡೆಗಳ ಪರಿಸರವಾದಿಗಳು, ಬುದ್ಧಿ ಜೀವಿಗಳು, ಹೊರಡಿಸಿದ್ದ ಕರ ಪತ್ರಗಳ ಕೆಲವು ಅಂಶಗಳು ಇಲ್ಲಿವೆ.

**ಉ. ಕ. ಜಿಲ್ಲೆ ಪರಿಸರ ಸಂರಕ್ಷಣಾ ಸಮಿತಿ**

ಉತ್ತರ ಕನ್ನಡ ಜಿಲ್ಲೆ ಅತ್ಯಂತ ಸುಂದರ ಜಿಲ್ಲೆ. ಅತ್ಯಂತ ಹೆಚ್ಚಿನ ಸಂಖ್ಯೆಯ ಜಲಪಾತಗಳಿರುವ ಜಿಲ್ಲೆ; ಅತ್ಯಂತ ಸಮೃದ್ಧ ವನಸಿರಿಯಿದ್ದ ಜಿಲ್ಲೆ; ಅತ್ಯಂತ ವೈವಿಧ್ಯಮಯ ಜನಾಂಗಗಳಿರುವ ಜಿಲ್ಲೆ (ಹಾಲಕ್ಕಿ, ಸಿದ್ಧಿ, ಹವ್ಯಕ, ನಾಡವ, ನಾಮಧಾರಿ, ಕುಣಬಿ, ಮುಕರಿ, ಗೌಳಿ, ಮುಸ್ಲಿಂ, ಕ್ರೈಸ್ತ, ಟಿಬೆಟಿಯನ್, ಮರಾಠಾ ಇತ್ಯಾದಿ); ಅತ್ಯಂತ ವೈವಿಧ್ಯಮಯ ಜಲಚರಗಳಿರುವ ಜಿಲ್ಲೆ; ಅತ್ಯಂತ ಸುಂದರ ಬಂದರು, ಕಡಲು ತೀರಗಳಿರುವ ಜಿಲ್ಲೆ; ಅತ್ಯಂತ ಹೆಚ್ಚು ವಿದ್ಯುತ್ ಉತ್ಪಾದಿಸುವ ಜಿಲ್ಲೆ; ಅತ್ಯಂತ ವೈವಿಧ್ಯಮಯ ಐತಿಹಾಸಿಕ ಚರಿತ್ರೆಯುಳ್ಳ ಜಿಲ್ಲೆ; ಅತ್ಯಂತ ಪೂಜನೀಯ ಧಾರ್ಮಿಕ ಕ್ಷೇತ್ರಗಳಿರುವ ಜಿಲ್ಲೆ; ಜಲಕ್ಷಾಮ, ಅತಿವೃಷ್ಟಿ, ನಿಸರ್ಗ ಪ್ರಕೋಪಗಳಿಂದ ದೂರವಿದ್ದ ಜಿಲ್ಲೆ

**ಆದರೆ-ಇಂದು ಏನಾಗುತ್ತಿದೆ ಈ ಜಿಲ್ಲೆಗೆ?** ಅತ್ಯಂತ ಹೆಚ್ಚಿನ ಅಪಾಯಕಾರಿ ಯೋಜನೆಗಳನ್ನು ಹಾಕಿಕೊಂಡ ಜಿಲ್ಲೆ; ಅತ್ಯಂತ ಕಡಿಮೆ ವಿದ್ಯುತ್ ಪೂರೈಕೆ ಇರುವ ಜಿಲ್ಲೆ; ಅತ್ಯಂತ ಹೆಚ್ಚು ಅಣೆಕಟ್ಟೆಗಳನ್ನು ನಿರ್ಮಿಸಿಕೊಂಡ ಜಿಲ್ಲೆ; ಅತ್ಯಂತ ಹೆಚ್ಚಿನ ನಿರಾಶ್ರಿತರನ್ನು ಸೃಷ್ಟಿಸಿದ ಜಿಲ್ಲೆ; ಅತ್ಯಂತ ಹೆಚ್ಚಿನ ನಿರಾಶ್ರಿತರನ್ನು ಅವುದು ಮಾಡಿಕೊಂಡ ಜಿಲ್ಲೆ; ಅತ್ಯಂತ ಹೆಚ್ಚು ಕಳೆಗಿಡಗಳನ್ನು ಬೆಳೆಸಿಕೊಂಡ ಜಿಲ್ಲೆ; ಕಬ್ಬಿಣ, ಮ್ಯಾಂಗನೀಸ್ ಅದಿರು, ಬಿದಿರು, ಬೆತ್ತ, ಬೀಟೆ. ಸಾಗವಾನಿ ಮುಂತಾದ ನಿಸರ್ಗ ಸಂಪತ್ತನ್ನು ಅತ್ಯಂತ ದೊಡ್ಡ ಪ್ರಮಾಣದಲ್ಲಿ ಕಳೆದುಕೊಳ್ಳುತ್ತಿರುವ ಜಿಲ್ಲೆ; ಕೊಳೆರೋಗ, ಹಳದಿರೋಗ, ದನಗಳ ಗರ್ಭಸ್ರಾವ, ಮಂಗನ ಕಾಯಿಲೆ, ಮುಂತಾದ ಚಿತ್ರ-ವಿಚಿತ್ರ ಕಷ್ಟ ಕೋಟಲೆಗಳನ್ನು ಸೃಷ್ಟಿಸಿಕೊಂಡ ಜಿಲ್ಲೆ. **ಈ ಎಲ್ಲ ಸಮಸ್ಯೆಗಳಿಗೆ ಇದು ಉತ್ತರ ಕಾಣದ ಜಿಲ್ಲೆ!**

ಈ ಜಿಲ್ಲೆಯನ್ನು ದೋಚುತ್ತಿರುವ ಧನಾಢ್ಯರ ಬಾಲಬಡುಕ ರಾಜಕಾರಣಿಗಳನ್ನು ನೀವು ಬೆಂಬಲಿಸುತ್ತೀರಾ? ಅಥವಾ ಈ ಜಿಲ್ಲೆಯ ದುರಂತಗಳ ಬಗ್ಗೆ ಜನ-ಜಾಗೃತಿ ಮಾಡುತ್ತಿರುವ ಧೀಮಂತ ಪಿತಾಮಹ **ಡಾ|| ಶಿವರಾಮ ಕಾರಂತರನ್ನು** ಲೋಕಸಭೆಗೆ ನಿಮ್ಮ ಪ್ರತಿನಿಧಿಯಾಗಿ ಆರಿಸುತ್ತೀರಾ.........

**ಪರಿಸರ ಸಂರಕ್ಷಣಾ ವೇದಿಕೆ,**
ಶಿವಮೊಗ್ಗ.

ಬನ್ನಿ, ಸೋದರ, ಸೋದರಿಯರೇ. **ಪರಿಸರದ ಆಕ್ರಂದನ ಕೈ ಬೀಸಿ ಕರೆಯುತ್ತಿದೆ.**

ನಮ್ಮ ಮಣ್ಣು-ನೀರು, ಗಿಡ-ಮರ ಸಮಸ್ತ ಜಲಚರ ಪ್ರಾಣಿ, ಪಶು-ಪಕ್ಷಿಗಳು ಸರಕಾರದ ತಪ್ಪು ನೀತಿಯಿಂದಾಗಿ ಅಪಾಯದ ಅಂಚಿನಲ್ಲಿವೆ. ಕೈಗಾ ಅಣುಸ್ಥಾವರದಂತಹ ಸುಡುವ ಕೆಂಡ ನಮ್ಮ ಮಡಿಲು ಸೇರಲಿದೆ.

ನಮ್ಮ ತಾತ್ಕಾಲಿಕ ಭೋಗಲಾಲಸೆಗೆ, ಪರಿಸರವನ್ನು ಸೂರೆಗೊಂಡು ಅಪ್ರೋಚನ ತೆಗೆದುಕೊಳ್ಳದೆ, ಅದರ ಧರ್ಮದರ್ಶಿಗಳು ನಾವೆಂದು ತಿಳಿದು, ಮುಂದಿನ ಜನಾಂಗಕ್ಕೆ ಕಾಪಾಡೋಣ........

**ಪರಿಸರ ಪ್ರೇಮಿಗಳು,**
**ಕರ್ನಾಟಕ**

ಕರ್ನಾಟಕದ ಪರಿಸರ ಚಳುವಳಿಯ ಪರಶುರಾಮ ಡಾ|| ಶಿವರಾಮ ಕಾರಂತರು ಉತ್ತರ ಕನ್ನಡ ಜಿಲ್ಲೆಯಿಂದ ಚುನಾವಣೆಗೆ ನಿಂತಿದ್ದಾರೆ. ಅವರು ಪ್ರತಿನಿಧಿಸುವುದು ಒಂದು ಲೋಕಸಭಾ ಕ್ಷೇತ್ರವನ್ನು ಮಾತ್ರವೇ ಅಲ್ಲ, ಒಂದು ಇಡೀ ಸಮಾಜ ತನ್ನ ಮಳೆಕಾಡು, ನದಿ, ಸಾಮೂಹಿಕ ಭೂಮಿಗಳ ಉಳಿವಿಗಾಗಿ ನಡೆಸುತ್ತಿರುವ ಹೋರಾಟವನ್ನು. ನಮ್ಮ ಪರಿಸರ, ಭವಿತವ್ಯಗಳ ಬಗೆಗಿನ ಕಾಳಜಿಯನ್ನು ನಾವೆಲ್ಲಾ ಹಂಚಿಕೊಳ್ಳೋಣ. ಭಾರತದ ಪ್ರಪ್ರಥಮ ಪರಿಸರ ಪ್ರತಿನಿಧಿಯನ್ನಾಗಿ ಡಾ|| ಕಾರಂತರನ್ನು ಚುನಾಯಿಸುವ ಶ್ರೇಯಸ್ಸು ಉತ್ತರ ಕನ್ನಡ ಜಿಲ್ಲೆಯ ಮತದಾರರಿಗೆ ದೊರೆತಿದೆ. ತಮ್ಮ ಅಮೂಲ್ಯವಾದ ಮತವನ್ನು ಡಾ|| ಶಿವರಾಮ ಕಾರಂತರಿಗೆ ನೀಡಬೇಕಾಗಿ ಪ್ರಾರ್ಥನೆ ....

ಇದಲ್ಲದೆ ದೂರದ ದೊಡ್ಡಬಳ್ಳಾಪುರದ 'ಪಿಕಾಕ್-ಡಾಲ್ಫಿನ್ ನಿಸರ್ಗ ಸಂಸ್ಥೆ' ಮುಂತಾದೆಡೆಗಳಿಂದಲೂ ಕಾರಂತರಿಗೆ, ಪರಿಸರ ಚಳುವಳಿಗೆ ಬೆಂಬಲ ಕೋರುವ ಕರಪತ್ರಗಳು ಪ್ರಸಾರಗೊಂಡಿದ್ದವು.

## ಪರಿಸರ ಜಾಗೃತಿ ವೇದಿಕೆಯ ಕೃತಜ್ಞತೆ

ಕಾರವಾರ ಕ್ಷೇತ್ರದಲ್ಲಿ ಪರಿಸರ ಚಳುವಳಿ ಪರವಾಗಿ ಸ್ಪರ್ಧಿಸಿದ್ದ ಡಾ|| ಶಿವರಾಮ ಕಾರಂತರ ಚುನಾವಣಾ ನಿಧಿಗಾಗಿ ದೇಣಿಗೆ ನೀಡಿದ ಎಲ್ಲ ಪರಿಸರ ಪ್ರೇಮಿ ಸಾರ್ವಜನಿಕರಿಗೂ ವೇದಿಕೆ ಹೃತ್ಪೂರ್ವಕ ಕೃತಜ್ಞತೆ ಸಲ್ಲಿಸುತ್ತದೆ.

'ಕಾರಂತ ನಿಧಿ' ಸಂಗ್ರಹಣೆಗೆ ನಾವು ಹಾಕಿಕೊಂಡಿದ್ದ ಅತ್ಯಂತ ಚಿಕ್ಕ ಗುರಿಯನ್ನು ಮೀರಿ 3513 ರೂ.ಗಳು ಕೇವಲ 3 ದಿನದಲ್ಲಿ ಸಂಗ್ರಹವಾಗಿದ್ದು, ಅಷ್ಟನ್ನೂ ಶಿರಸಿಯಲ್ಲಿ 'ಕಾರಂತ ನಿಧಿ'ಗೆ ಸಲ್ಲಿಸಲಾಗಿದೆ

ಕಾರಂತರು ಸೋತಿದ್ದಾರೆ, ಅಷ್ಟೇ ಅಲ್ಲ, ಠೇವಣಿಯನ್ನೂ ಕಳೆದುಕೊಂಡಿದ್ದಾರೆ. ಇದೇ ರೀತಿ ಪೈಪೋಟಿಯಲ್ಲೂ ಡಾ|| ಪ್ರಥಮಬಾರಿಗೆ ಪರಿಸರ ಚಳುವಳಿ ಪರವಾಗಿ ಸ್ಪರ್ಧಿಸಿ, ಇದೇ ಫಲಿತಾಂಶ ಪಡೆದಿದ್ದಾರೆ. ಆದರೆ ಭಾರತದಲ್ಲಿ ಪರಿಸರ ಚಳುವಳಿಯ ಪಾಲಿಗೆ ಇದಿನ್ನೂ ಮೊತ್ತ ಮೊದಲ ಹೆಜ್ಜೆ. ಕಾರಂತರಿಗೆ ಬಿದ್ದ 58 ಸಾವಿರ ಮತಗಳಲ್ಲಿ ಪ್ರತಿಯೊಂದಕ್ಕೂ ಅದರದ್ದೇ ಚೈತನ್ಯವಿದೆ. ಆದ್ದರಿಂದ ಈ ಮೊದಲ ಹೆಜ್ಜೆ ಹಿಂದೆ ತಿರುಗದೆ ತನ್ನ ಗುರಿಯತ್ತ ಮುಂದುವರಿಯುತ್ತಲೇ ಹೋಗುವುದೆಂಬ ವಿಶ್ವಾಸ ನಮ್ಮದು.

ಪ್ರಚಾರಕ್ಕಾಗಿ ತೆರಳಿದ್ದ ವೇದಿಕೆಯ ತಂಡ ಹೀಗಿದೆ : ಎಚ್. ಎ. ವಸಂತ ಕುಮಾರ್ ಹರ್ತಿಕೋಟೆ, ಎಚ್. ಭುಜಂಗ ರಾವ್, ಎಚ್. ರತ್ನಾಕರ ರಾವ್ (ವೇದಿಕೆ ಸದಸ್ಯರು), ಸತ್ಯಮೂರ್ತಿ ಹೆಬ್ಬಾರ್, ಶಶಿಧರ ಪೈ, ರಾಘವೇಂದ್ರ ರಾವ್, ಎ. ಎಸ್. ಸತೀಶ್, ಸಂಜಯ ಕೆ ಎಸ್. (ಎಲ್ಲರೂ ಆಯುರ್ವೇದ ವಿದ್ಯಾರ್ಥಿಗಳು) ಹಾಗೂ ಕೊಂಡಿಬೈಲ್ ಸತೀಶ್ (ಆ ಕಾಲೇಜಿನ ಗ್ರಂಥಪಾಲಕರು )

## 'ಮಾರ್ಗ್'ಸಮೀಕ್ಷಾ ತಂಡದ ಬಗ್ಗೆ ನಾಗರಿಕರ ಆಕ್ರೋಶ

ರಿಪ್ಪನ್‌ಪೇಟೆ : 'ಇಂಡಿಯಾ ಟುಡೇ' ರಾಷ್ಟ್ರೀಯ ಪತ್ರಿಕೆಗಾಗಿ ಮತದಾರರ ಸಮೀಕ್ಷೆ ನಡೆಸಲು ಈಚೆಗೆ ಇಲ್ಲಿಗೆ ಬಂದಿದ್ದ 'ಮಾರ್ಗ್' ಸಮೀಕ್ಷಾ ತಂಡವನ್ನು ಇಲ್ಲಿನ ನಾಗರಿಕರು ತೀವ್ರ ತರಾಟೆಗೆ ತೆಗೆದುಕೊಂಡರು.

ಕೇವಲ ಕಾಂಗ್ರೆಸ್ ಬಗ್ಗೆ ಮಾತ್ರ ಪ್ರಶ್ನೆ ಮಾಡಿ ತಮಗೆ ಬೇಕಾದ ಸಿದ್ಧ ಉತ್ತರ ಪಡೆಯುವ ಹಾಗೂ ಕಾಂಗ್ರೆಸ್, ದಳ ಮತ್ತು ಜನತಾ ಪಕ್ಷದ ಚಿಹ್ನೆ ಮಾತ್ರ ಇರುವ ಮಾದರಿ ಮತ ಪತ್ರ ನೀಡುವ ತಂಡದ ವರ್ತನೆಯನ್ನು ಖಂಡಿಸಿದ ನಾಗರಿಕರು, ಚುನಾವಣೆಯ ಮೊದಲು 'ಕಾಂಗ್ರೆಸ್ ಅಲೆ' ಮಾತ್ರ ಇದೆ ಎಂದು ಸುಳ್ಳು ಸುದ್ದಿ ಹಬ್ಬಿಸಿ ಓಟು ದೋಚುವ ಕಾಂಗ್ರೆಸ್ಸಿನ ಏಜೆಂಟರೆಂದು ಆಪಾದಿಸಿದರು.

ನಾಗರಿಕರಿಗೂ ತಂಡದ ಸದಸ್ಯರಿಗೂ ತೀವ್ರ ಮಾತಿನ ಚಕಮಕಿ ನಡೆದು ಕೊನೆಗೆ ತಂಡ ಕ್ಷಮೆ ಯಾಚಿಸುವಲ್ಲಿ ಪರ್ಯವಸಾನವಾಯಿತು.

('ತೀರ್ಥಹಳ್ಳಿ ಗ್ರಾಮ ಭಾರತಿ'ಯಿಂದ)

### ಕಾರವಾರ ಕ್ಷೇತ್ರದ ಮತಗಣನೆ

| | |
|---|---|
| ಒಟ್ಟು ಮತದಾರರು | 9,67,236 |
| ಚಲಾವಣೆಯಾದುವು | 6,68,951 |
| ದೇವರಾಯ ನಾಯಕ (ಕಾಂಗ್ರೆಸ್) | 2 40,571 |
| ಅನಂತನಾಗ್ (ಜನತಾದಳ) | 2,08 803 |
| ಡಾ|| ಶಿವರಾಮ ಕಾರಂತ | 58,992 |

# ...ರದಲ್ಲಿ ಶಿವರಾಮ ಕಾರಂತರ ಸ್ಪರ್ಧೆ

...ಠಿಸಿ, ಸುಮಾ
...ತ್ತು ಪ್ರಚಾರ
...ರ ವಸತಿಗಳಲ್ಲಿ
...ಕ್ಷದವರು ಪ್ರಚಾ
...ಪಾಯಕರವೆಂದು
...ೂ ನಾವು ಅಲ್ಲಿ
...ರದ ಉದ್ದೇಶಿತ
...ಾ. ಅಣುಸ್ಥಾವರ
...ತಮ್ಮ ಸರ್ವಸ್ವ
ಜನಾಂಗದವರಿಗೆ
...ಅರ್ಥವಾಗುವುದು
...ಪ್ರಚಾರ, ಪುಕಾರು
...ಸಿರುವುದು ನಮಗೆ
...ರಂತರಿಗೆ ಸೌಖ್ಯವಿಲ್ಲ.
ಹೋಗಿದ್ದಾರೆ. ಈ
...ೇಕೆ ಚುನಾವಣೆ ?";
...ಯುವರಲ್ಲ" ಮುಂತಾದ
ಜೊತೆ ಒಬ್ಬ ವಕೀಲರು
...ತ್ತು" ಎಂಬ ಪ್ರಚಾರ

**...ರ ವರ್ಣ ಚಿತ್ರ**

...ದ ಸದಸ್ಯ, ಆಯುರ್ವೇದ
...ರ್ಥಿ ಎ. ಎಸ್. ಸತೀಶ್
...ರು 18"X15" ಅಳತೆಯ
...ತ್ರವೊಂದನ್ನು ನಾಗೇಶ್
...ರರು ಅಪಾರವಾಗಿ ಮೆಚ್ಚಿ
ಅದನ್ನು ತಮ್ಮ ಪ್ರಚಾರ
...ಮುಂಭಾಗದಲ್ಲಿ ಕಟ್ಟಿ ಹಾಕಿ
...ಲು ತೆಗೆದುಕೊಂಡರು. ಅದರ
...ರ್ಸ್ ಪ್ರತಿಗಳನ್ನೂ ಮಾಡಿಸಿ

...ತ್ರದಲ್ಲಿ, ತಿಳಿ ನಗು ಮುಖದ
ಕೈಲಿ ಹಿಡಿದ ಪೆನ್ನಿನ ಹಿಂಭಾಗ
...ಡವಾಗಿ ಮರವಾಗಿದೆ ಮುಂಭಾ
...ಕ್ಷರಗಳು ಆನೆಗಳ ಆಕಾರವಾಗು
...ಗಳೇ ಆಗಿ ಮುಂದೆ ಹೋಗಿ, ಅಣು
...ವೊಂದನ್ನು ಸೊಂಡಿಲಿನಿಂದ ಸುತ್ತಿ
...ವೆ (ಕಾರಂತರ ಚುನಾವಣಾ
ಆಸೆ")

ಕೂಡ ನಡೆಸಿದ್ದು ಅರಿವಾಗುತ್ತಿತ್ತು.

ಪರಿಸರವಾದಿಗಳ ಪಾಲಿಗೆ, ಕಾರಂತರ ಪರ ಪ್ರಚಾರ ಕಾರ್ಯ ಮತ್ತೊಂದು ವಿಪರೀತ ಕಲ್ಲು-ಮುಳ್ಳಿನ ಹಾದಿಯೇ ಸರಿ. ಆದಾಗ್ಯೂ ಉತ್ತರ ಕನ್ನಡ, ಶಿವಮೊಗ್ಗ ಮಾತ್ರವಲ್ಲದೆ ದೂರ ದೂರದ ಊರುಗಳಿಂದಲೂ ಬೆಂಬಲ, ಸಹಾಯ ಹಸ್ತ ಸಿಕ್ಕಿತ್ತು. ಖ್ಯಾತ ಗಾಂಧಿವಾದಿಗಳಾದ ದೊರೆಸ್ವಾಮಿ, ಹಿರೇಮಠ್, ಪತ್ರಕರ್ತರಾದ ನಾಗೇಶ್ ಹೆಗಡೆ, ಎಸ್. ಆರ್. ರಾಮಸ್ವಾಮಿ, ಚಿತ್ರ ನಟರಾದ ಸುರೇಶ್ ಹೆಬ್ಳೀಕರ್, ಅಶೋಕ್ ಮುಂತಾದವರ ಮಾರ್ಗದರ್ಶನದಲ್ಲಿ ಪರಿಸರ ಕಾರ್ಯಕರ್ತರು ಹಗಲಿರುಳು ಪ್ರಚಾರ ಕಾರ್ಯ ನಡೆಸಿದರು.

ಇಂಥ ಪ್ರಚಾರ, ಬಿಜೆಪಿಯ ಪೂರ್ಣ ಬೆಂಬಲ, ಬುದ್ಧಿ ಜೀವಿ ವರ್ಗದ ಒಲವು ಇವುಗಳ ಜೊತೆಗೆ ಪ್ರಬಲ ಪಕ್ಷಗಳೊಳಗಿನ ಮುಸುಕಿನ ಗುದ್ದಾಟ — ಇವುಗಳಿಂದಾಗಿ ಒಂದು ವೇಳೆ ಕಾರಂತರು ಗೆದ್ದರೂ ಗೆಲ್ಲಬಹುದು ಆದರೂ ರಾಜಕೀಯದಲ್ಲಿ ಕೊನೆ ಘಳಿಗೆಯವರೆಗೆ ಏನೂ ಹೇಳುವುದು ಕಷ್ಟ. ಕಾರಂತರು ಗೆದ್ದರೆ ಅದ, ಈ ನಾಡಿನ ಪ್ರಕೃತಿಯ ಜಯ ಅವರು ಸೋತರೂ ಅದು ಅವರ ಸೋಲಲ್ಲ ಅಥವಾ ಕೇವಲ ಪರಿಸರ ಚಳುವಳಿಯ ಸೋಲಲ್ಲ; ಅದು ಭವಿಷ್ಯದಲ್ಲಿ ಭೀಕರ ಪರಿಣಾಮಗಳಿಗೆ ನಾಂದಿ—ಎಂಬಂಥ ಮಿಶ್ರ ಭಾವನೆಗಳ ತಾಕಲಾಟದೊಂದಿಗೆ ನಮ್ಮ ಪ್ರವಾಸ ಮುಗಿಸಿ ವಾಪಸಾದೆವು

ಆದರೂ, ಕಾರಂತರು ಈ ಹೊತ್ತು ಇಲ್ಲೇ ಇರುತ್ತಿದ್ದರೆ ಹಾಗೂ ಪ್ರಚಾರಕ್ಕೆ ಕಾರ್ಯಕರ್ತರು ಮತ್ತು ಇತರ ಸೌಕರ್ಯಗಳು ಇನ್ನೂ ಸಾಕಷ್ಟು ಇರುತ್ತಿದ್ದರೆ ಪರಿಸರ ಚಳುವಳಿಯ ಈ ಒಂದು ಹೊಸ ಆಯಾಮ—ಸಂಸದೀಯ ವೇದಿಕೆಯನ್ನು ಬಳಸಿಕೊಳ್ಳುವ ಚೊಚ್ಚಲ ಯತ್ನ— ಇನ್ನಷ್ಟು ಶಕ್ತಿಯುತವಾಗುತ್ತಿತ್ತು ಅನ್ನಿಸದೆ ಇರಲಿಲ್ಲ.

○

ಬಗ್ಗೆ ನಾಗರಿಕ...

ರಿಪ್ಪನ್‌ಪೇಟೆ : 'ಇಂಡಿಯಾ ಟುಡೇ' ರಾಷ್ಟ್ರೀಯ ಪತ್ರಿಕೆಗಾಗಿ ಮತದಾರರ ಸಮೀಕ್ಷೆ ನಡೆಸಲು ಈಚೆಗೆ ಇಲ್ಲಿಗೆ ಬಂದಿದ್ದ 'ಮಾರ್ಗ್' ಸಮೀಕ್ಷಾ ತಂಡವನ್ನು ಇಲ್ಲಿನ ನಾಗರಿಕರು ತೀವ್ರ ತರಾಟೆಗೆ ತೆಗೆದುಕೊಂಡರು.

ಕೇವಲ ಕಾಂಗ್ರೆಸ್ ಬಗ್ಗೆ ಮಾತ್ರ ಪ್ರಶ್ನೆ ಮಾಡಿ ತಮಗೆ ಬೇಕಾದ ಸಿದ್ಧ ಉತ್ತರ ಪಡೆಯುವ ಹಾಗೂ ಕಾಂಗ್ರೆಸ್, ದಳ ಮತ್ತು ಜನತಾ ಪಕ್ಷದ ಚಿಹ್ನೆ ಮಾತ್ರ ಇರುವ ಮಾದರಿ ಮತ ಪತ್ರ ನೀಡುವ ತಂಡದ ವರ್ತನೆಯನ್ನು ಖಂಡಿಸಿದ ನಾಗರಿಕರು, ಚುನಾವಣೆಯ ಮೊದಲು 'ಕಾಂಗ್ರೆಸ್ ಅಲೆ' ಮಾತ್ರ ಇದೆ ಎಂದು ಸುಳ್ಳು ಸುದ್ದಿ ಹಬ್ಬಿಸಿ ಓಟು ದೋಚುವ ಕಾಂಗ್ರೆಸ್‌ನ ಏಜೆಂಟರೆಂದು ಅಪಾದಿಸಿದರು.

ನಾಗರಿಕರಿಗೂ ತಂಡದ ಸದಸ್ಯರಿಗೂ ತೀವ್ರ ಮಾತಿನ ಚಕಮಕಿ ನಡೆದು ಕೊನೆಗೆ ತಂಡ ಕ್ಷಮೆ ಯಾಚಿಸುವಲ್ಲಿ ಪರ್ಯವಸಾನವಾಯಿತು.

('ತೀರ್ಥಹಳ್ಳಿ ಗ್ರಾಮ ಭಾರತಿ'ಯಿಂದ)

## ಕೆಲವು ಕರ ಪತ್ರಗಳು

ಕಾರಂತರನ್ನು ಬೆಂಬಲಿಸಿ ವಿವಿಧ ಕಡೆಗಳ ಪರಿಸರವಾದಿಗಳು, ಬುದ್ಧಿ ಜೀವಿಗಳು, ಹೊರಡಿಸಿದ್ದ ಕರ ಪತ್ರಗಳ ಕೆಲವು ಅಂಶಗಳು ಇಲ್ಲಿವೆ.

**ಉ. ಕ. ಜಿಲ್ಲೆ ಪರಿಸರ ಸಂರಕ್ಷಣಾ ಸಮಿತಿ**

ಉತ್ತರ ಕನ್ನಡ ಜಿಲ್ಲೆ ಅತ್ಯಂತ ಸುಂದರ ಜಿಲ್ಲೆ. ಅತ್ಯಂತ ಹೆಚ್ಚಿನ ಸಂಖ್ಯೆಯ ಜಲಪಾತಗಳಿರುವ ಜಿಲ್ಲೆ; ಅತ್ಯಂತ ಸಮೃದ್ಧ ವನಸಿರಿಯಿದ್ದ ಜಿಲ್ಲೆ; ಅತ್ಯಂತ ವೈವಿಧ್ಯಮಯ ಜನಾಂಗಗಳಿರುವ ಜಿಲ್ಲೆ (ಹಾಲಕ್ಕಿ, ಸಿದ್ಧಿ, ಹವ್ಯಕ, ನಾಡವ, ನಾಮಧಾರಿ, ಕುಣಬಿ, ಮುಕರಿ, ಗೌಳಿ, ಮುಸ್ಲಿಂ, ಕ್ರೈಸ್ತ, ಟಿಬೆಟಿಯನ್, ಮರಾಠಾ ಇತ್ಯಾದಿ); ಅತ್ಯಂತ ವೈವಿಧ್ಯಮಯ ಜಲಚರಗಳಿರುವ ಜಿಲ್ಲೆ; ಅತ್ಯಂತ ಸುಂದರ ಬಂದರು, ಕಡಲು ತೀರಗಳಿರುವ ಜಿಲ್ಲೆ; ಅತ್ಯಂತ ಹೆಚ್ಚು ವಿದ್ಯುತ್ ಉತ್ಪಾದಿಸುವ ಜಿಲ್ಲೆ; ಅತ್ಯಂತ ವೈವಿಧ್ಯಮಯ ಐತಿಹಾಸಿಕ ಚರಿತ್ರೆಯುಳ್ಳ ಜಿಲ್ಲೆ; ಅತ್ಯಂತ ಪೂಜ್ಯ ಧಾರ್ಮಿಕ ಕ್ಷೇತ್ರಗಳಿರುವ ಜಿಲ್ಲೆ; ಜಲಕ್ಷಾಮ, ಅತಿವೃಷ್ಟಿ, ನಿಸರ್ಗ ಪ್ರಕೋಪಗಳಿಂದ ದೂರವಿದ್ದ ಜಿಲ್ಲೆ

ಆದರೆ-ಇಂದು ಏನಾಗುತ್ತಿದೆ ಈ ಜಿಲ್ಲೆಗೆ? ಅತ್ಯಂತ ಹೆಚ್ಚಿನ ಅಪಾಯಕಾರಿ ಯೋಜನೆಗಳನ್ನು ಹಾಕಿಕೊಂಡ ಜಿಲ್ಲೆ; ಅತ್ಯಂತ ಕಡಿಮೆ ವಿದ್ಯುತ್ ಪೂರೈಕೆ ಇರುವ ಜಿಲ್ಲೆ; ಅತ್ಯಂತ ಹೆಚ್ಚು ಅಣೆಕಟ್ಟುಗಳನ್ನು ನಿರ್ಮಿಸಿಕೊಂಡ ಜಿಲ್ಲೆ; ಅತ್ಯಂತ ಹೆಚ್ಚಿನ ನಿರಾಶ್ರಿತರನ್ನು ಸೃಷ್ಟಿಸಿದ ಜಿಲ್ಲೆ; ಅತ್ಯಂತ ಹೆಚ್ಚಿನ ನಿರಾಶ್ರಿತರನ್ನು ಆಮದು ಮಾಡಿಕೊಂಡ ಜಿಲ್ಲೆ; ಅತ್ಯಂತ ಹೆಚ್ಚು ಕಳೆಗಿಡಗಳನ್ನು ಬೆಳೆಸಿಕೊಂಡ ಜಿಲ್ಲೆ; ಕಬ್ಬಿಣ, ಮ್ಯಾಂಗನೀಸ್ ಅದಿರು, ಬಿದಿರು, ಬೆತ್ತ, ಬೀಟೆ, ಸಾಗವಾನಿ ಮುಂತಾದ ನಿಸರ್ಗ ಸಂಪತ್ತನ್ನು ಅತ್ಯಂತ ದೊಡ್ಡ ಪ್ರಮಾಣದಲ್ಲಿ ಕಳೆದುಕೊಳ್ಳುತ್ತಿರುವ ಜಿಲ್ಲೆ; ಕೊಳೆರೋಗ, ಹಳದಿರೋಗ, ದನಗಳ ಗರ್ಭಸ್ರಾವ, ಮಂಗನ ಕಾಯಿಲೆ, ಮುಂತಾದ ಚಿತ್ರ-ವಿಚಿತ್ರ ಕಷ್ಟ ಕೋಟಲೆಗಳನ್ನು ಸೃಷ್ಟಿಸಿಕೊಂಡ ಜಿಲ್ಲೆ. **ಈ ಎಲ್ಲ ಸಮಸ್ಯೆಗಳಿಗೆ ಇದು ಉತ್ತರ ಕಾಣದ ಜಿಲ್ಲೆ!**

ಈ ಜಿಲ್ಲೆಯನ್ನು ದೋಚುತ್ತಿರುವ ಧನಾಢ್ಯರ ಬಾಲಬಡುಕ ರಾಜಕಾರಣಿಗಳನ್ನು ನೀವು ಬೆಂಬಲಿಸುತ್ತೀರಾ? ಅಥವಾ ಈ ಜಿಲ್ಲೆಯ ದುರಂತಗಳ ಬಗ್ಗೆ ಜನಜಾಗೃತಿ ಮಾಡುತ್ತಿರುವ ಧೀಮಂತ ಪಿತಾಮಹ **ಡಾ॥ ಶಿವರಾಮ ಕಾರಂತರನ್ನು** ಲೋಕಸಭೆಗೆ ನಿಮ್ಮ ಪ್ರತಿನಿಧಿಯಾಗಿ ಆರಿಸುತ್ತೀರಾ.......

**ಪರಿಸರ ಸಂರಕ್ಷಣಾ ವೇದಿಕೆ, ಶಿವಮೊಗ್ಗ.**

ಬನ್ನಿ, ಸೋದರ, ಸೋದರಿಯರೇ. **ಪರಿಸರದ ಆಕ್ರಂದನ ಕೈ ಬೀಸಿ ಕರೆಯುತ್ತಿದೆ.**

ನಮ್ಮ ಮಣ್ಣು-ನೀರು, ಗಿಡ-ಮರ ಸಮಸ್ತ ಜಲಚರ ಪ್ರಾಣಿ, ಪಶು-ಪಕ್ಷಿಗಳು ಸರಕಾರದ ತಪ್ಪು ನೀತಿಯಿಂದಾಗಿ ಅಪಾಯದ ಅಂಚಿನಲ್ಲಿವೆ. ಕೈಗಾ ಅಣು ಸ್ಥಾವರದಂತಹ ಸುಡುವ ಕೆಂಡ ನಮ್ಮ ಮಡಿಲು ಸೇರಲಿದೆ.

ನಮ್ಮ ತಾತ್ಕಾಲಿಕ ಭೋಗಲಾಲಸೆಗೆ, ಪರಿಸರವನ್ನು ಸೂರೆಗೊಂಡು ಅಪೋಶನ ತೆಗೆದುಕೊಳ್ಳದೆ, ಅದರ ಧರ್ಮದರ್ಶಿಗಳು ನಾವೆಂದು ತಿಳಿದು, ಮುಂದಿನ ಜನಾಂಗಕ್ಕೆ ಕಾಪಾಡೋಣ........

**ಪರಿಸರ ಪ್ರೇಮಿಗಳು, ಕರ್ನಾಟಕ**

ಕರ್ನಾಟಕದ ಪರಿಸರ ಚಳುವಳಿಯ ಪರಶುರಾಮ ಡಾ॥ ಶಿವರಾಮ ಕಾರಂತರು ಉತ್ತರ ಕನ್ನಡ ಜಿಲ್ಲೆಯಿಂದ ಚುನಾವಣೆಗೆ ನಿಂತಿದ್ದಾರೆ. ಅವರು ಪ್ರತಿನಿಧಿಸುವುದು ಒಂದು ಲೋಕಸಭಾ ಕ್ಷೇತ್ರವನ್ನು ಮಾತ್ರವೇ ಅಲ್ಲ, ಒಂದು ಇಡೀ ಸಮಾಜ ತನ್ನ ಮಳೆಕಾಡು, ನದಿ, ಸಾಮೂಹಿಕ ಭೂಮಿಗಳ ಉಳಿವಿಗಾಗಿ ನಡೆಸುತ್ತಿರುವ ಹೋರಾಟವನ್ನು. ನಮ್ಮ ಪರಿಸರ, ಭವಿತವ್ಯಗಳ ಬಗೆಗಿನ ಕಾಳಜಿಯನ್ನು ನಾವೆಲ್ಲಾ ಹಂಚಿಕೊಳ್ಳೋಣ. ಭಾರತದ ಪ್ರಪ್ರಥಮ ಪರಿಸರ ಪ್ರತಿನಿಧಿಯನ್ನಾಗಿ ಡಾ॥ ಕಾರಂತರನ್ನು ಚುನಾಯಿಸುವ ಶ್ರೇಯಸ್ಸು ಉತ್ತರ ಕನ್ನಡ ಜಿಲ್ಲೆಯ ಮತದಾರರಿಗೆ ದೊರೆತಿದೆ. ತಮ್ಮ ಅಮೂಲ್ಯವಾದ ಮತವನ್ನು ಡಾ॥ ಶಿವರಾಮ ಕಾರಂತರಿಗೆ ನೀಡಬೇಕಾಗಿ ಪ್ರಾರ್ಥನೆ ....

ಇದಲ್ಲದೆ ದೂರದ ದೊಡ್ಡಬಳ್ಳಾಪುರದ 'ಪಿಕಾಕ್-ಡಾಲ್ಫಿನ್' ನಿಸರ್ಗ ಸಂಸ್ಥೆ, ಮುಂತಾದೆಡೆಗಳಿಂದಲೂ ಕಾರಂತರಿಗೆ, ಪರಿಸರ ಚಳುವಳಿಗೆ ಬೆಂಬಲ ಕೋರುವ ಕರಪತ್ರಗಳು ಪ್ರಸಾರಗೊಂಡಿದ್ದವು.

**ಕಾರವಾರ ಕ್ಷೇತ್ರದ ಮತಗಣನೆ**

| | |
|---|---|
| ಒಟ್ಟು ಮತದಾರರು | 9,67,236 |
| ಚಲಾವಣೆಯಾದುವು | 6,68,951 |
| ದೇವರಾಯ ನಾಯಕ (ಕಾಂಗ್ರೆಸ್) | 2,40,57[illegible] |
| ಅನಂತನಾಗ್ (ಜನತಾದಳ) | 2,08,80[illegible] |
| ಡಾ|ಶಿವರಾಮ ಕಾರಂತ | 58,[illegible] |

## ಪರಿಸರ ಜಾಗೃತಿ ವೇದಿಕೆಯ ಕೃತಜ್ಞತೆ

...ಕಾರವಾರ ಕ್ಷೇತ್ರದಲ್ಲಿ ಪರಿಸರ ಚಳು...
...ಪರವಾಗಿ ಸ್ಪರ್ಧಿಸಿದ್ದ ಡಾ॥ ಶಿವರಾಮ
...ರಂತರ ಚುನಾವಣಾ ನಿಧಿಗಾಗಿ ದೇಣಿಗೆ
...ಡಿದ ಎಲ್ಲ ಪರಿಸರ ಪ್ರೇಮಿ ಸಾರ್ವಜನಿ...
...ಗೂ ವೇದಿಕೆ ಹೃತ್ಪೂರ್ವಕ ಕೃತಜ್ಞತೆ
...ಲ್ಲಿಸುತ್ತದೆ.

'ಕಾರಂತ ನಿಧಿ' ಸಂಗ್ರಹಣೆಗೆ ನಾವು ಹಾಕಿ...
...ಕೊಂಡಿದ್ದ ಅತ್ಯಂತ ಚಿಕ್ಕ ಗುರಿಯನ್ನು
...ಮೂರು 3513 ರೂ.ಗಳು ಕೇವಲ 3 ದಿನ
...ದಲ್ಲಿ ಸಂಗ್ರಹವಾಗಿದ್ದು, ಅಷ್ಟನ್ನೂ ಶಿರಸಿ
...ಯಲ್ಲಿ 'ಕಾರಂತ ನಿಧಿ'ಗೆ ಸಲ್ಲಿಸಲಾಗಿದೆ.

ಕಾರಂತರು ಸೋತಿದ್ದಾರೆ, ಅಷ್ಟೇ ಅಲ್ಲ, ಠೇವಣಿಯನ್ನೂ ಕಳೆದುಕೊಂಡಿದ್ದಾರೆ. ಅದೇ ರೀತಿ ಪೈಲೂರಿನಲ್ಲೂ ಡಾ॥ ಪ್ರಭು ಎಂಬುವರು ಪರಿಸರ ಚಳುವಳಿ ಪರವಾಗಿ ಸ್ಪರ್ಧಿಸಿ ಇದೇ ಫಲಿತಾಂಶ ಪಡೆದಿದ್ದಾರೆ. ಆದರೆ ಭಾರತದಲ್ಲಿ ಪರಿಸರ ಚಳುವಳಿಯ ಪಾಲಿಗೆ ಇದಿನ್ನೂ ಮೊತ್ತ ಮೊದಲ ಹೆಜ್ಜೆ. ಕಾರಂತರಿಗೆ ಬಿದ್ದ 58 ಸಾವಿರ ಮತಗಳಲ್ಲಿ ಪ್ರತಿಯೊಂದಕ್ಕೂ ಅದಮ್ಯ ಚೈತನ್ಯವಿದೆ. ಆದ್ದರಿಂದ ಈ ಮೊದಲ ಹೆಜ್ಜೆ ಹಿಂದೆ ತಿರುಗದೆ ತನ್ನ ಗುರಿಯತ್ತ ಮುಂದುವರಿಯುತ್ತಲೇ ಹೋಗುವುದೆಂಬ ವಿಶ್ವಾಸ ನಮ್ಮದು.

ಪ್ರಚಾರಕ್ಕಾಗಿ ತೆರಳಿದ್ದ ವೇದಿಕೆಯ ತಂಡ ಹೀಗಿದೆ : ಎಚ್. ಎ. ವಸಂತ ಕುಮಾರ್ ಹರ್ಷೀಕರ್, ಎಚ್. ಭುಜಂಗ ರಾವ್, ಎಚ್. ರತ್ನಾಕರ ರಾವ್ (ವೇದಿಕೆ ಸದಸ್ಯರು), ಸತ್ಯಮೂರ್ತಿ ಹೆಬ್ಬಾರ್, ಶಶಿಧರ ಪೈ, ರಾಘವೇಂದ್ರ ರಾವ್, ಎ. ಎಸ್. ಸತೀಶ್, ಸಂಜಯ ಕೆ. ಎಸ್. (ಎಲ್ಲರೂ ಆಯುರ್ವೇದ ವಿದ್ಯಾರ್ಥಿಗಳು) ಹಾಗೂ ಕೊಂಡಿಬೈಲ್ ಸತೀಶ್ (ಶಿ ರಾ ಲೇಜಿನ ಗ್ರಂಥಪಾಲಕರು)

**ಓದುಗರ ಪತ್ರ**

## ಬಸರಿಕಟ್ಟೆಯಲ್ಲಿ ಬಾಡಿಗೆ ರೂಮುಗಳು ಬ್ಯಾಂಕಿನವರಿಗೆ ಮಾತ್ರ?

ಮಾನ್ಯರೆ,

ಬಸರಿಕಟ್ಟೆಯಲ್ಲಿ ಸಾಮಾನ್ಯ ನೌಕರನೊಬ್ಬನಿಗೆ, ಅದರಲ್ಲೂ ಶಾಲಾ ಉಪಾಧ್ಯಾಯರಿಗೆ ಒಂದು ರೂಮು ಬಾಡಿಗೆಗೆ ಸಿಕ್ಕರೆ ಸ್ವರ್ಗವೇ ಸಿಕ್ಕಷ್ಟು ಸಂತೋಷವಾಗುವ ಪರಿಸ್ಥಿತಿಯಿದೆ. ಇರುವ ಕೆಲವೇ ಕೆಲವು ಬಾಡಿಗೆ ರೂಮುಗಳವರೆಲ್ಲ ತಾವು ಮೊದಲು ಬ್ಯಾಂಕಿನವರಿಗೇ ಪ್ರಾಶಸ್ತ್ಯ ಕೊಡುವುದಾಗಿ ಹೇಳುತ್ತಾರೆ ಹೊಸದಾಗಿ ಬಂದ ಬ್ಯಾಂಕ್ ಉದ್ಯೋಗಿಗೆ ಕೂಡಲೇ ರೂಮು ಸಿಕ್ಕರೆ, ಬಹು ಹಿಂದೆಯೇ ಬಂದ ಶಿಕ್ಷಕಿಗೆ ರೂಮು ಸಿಕ್ಕಿಲ್ಲ. ಹೀಗೆ ಇರುವ ರೂಮುಗಳೆಲ್ಲ ಬ್ಯಾಂಕಿನವರಿಗೇ ಮೀಸಲಾದರೆ ಸುತ್ತಮುತ್ತಲ 4 ಶಾಲೆಗಳ ಉಪಾಧ್ಯಾಯ ವೃಂದದವರು ಎಲ್ಲಿಗೆ ಹೋಗಬೇಕು ?

ಈ ತಾರತಮ್ಯ ಏಕೆ ? ಬ್ಯಾಂಕಿನವರು ಸಾಲ ಕೊಡುತ್ತಾರೆಂತಲೊ? ಅವರೇನೂ ತಮ್ಮ ಮಿತಿಯನ್ನು ಮೀರಿ ಇವರಿಗೆ ಸಾಲ ಕೊಡುವುದಿಲ್ಲವಲ್ಲ ? ರೂಮು ಸಿಗದ ತಲೆಬಿಸಿಯಲ್ಲಿ ಶಿಕ್ಷಕ ಕೆಲಸ ನಿರ್ವಹಿಸಬೇಕಾದಲ್ಲಿ ಇವರ ಮಕ್ಕಳ ಭವಿತವ್ಯಕ್ಕೇ ಹಾನಿಯಲ್ಲವೆ ?

—ಒಬ್ಬ ನೊಂದ ಶಿಕ್ಷಕ,
ಬಸರಿಕಟ್ಟೆ.

## ಕನ್ನಡ ಸಂಸ್ಕೃತಿ ಇಲಾಖೆಯ ಸವಲತ್ತುಗಳು

ಚಿಕ್ಕಮಗಳೂರು : ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು 1989-90ನೇ ಸಾಲಿನಲ್ಲಿ ಈ ಕೆಳಕಂಡ ಕೆಲವು ಸವಲತ್ತು/ಧನ ಸಹಾಯ/ಬಹುಮಾನಗಳಿಗಾಗಿ ಅರ್ಜಿಗಳನ್ನು ಆಹ್ವಾನಿಸಿದೆ. ಆಸಕ್ತ, ಅರ್ಹ ಅಭ್ಯರ್ಥಿಗಳು ಆಯಾ ಜಿಲ್ಲೆಯ ಇಲಾಖಾ ಸಹಾಯಕ ನಿರ್ದೇಶಕರುಗಳಿಂದ ಅರ್ಜಿಗಳನ್ನು ಪಡೆದು, ಅವರ ಮೂಲಕವೇ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನಂ. 14-3 ಅ, ನೃಪತುಂಗ ರಸ್ತೆ, ಬೆಂಗಳೂರು-2, ಇವರಿಗೆ ದಿನಾಂಕ 10-12-89ರೊಳಗಾಗಿ ತಲುಪುವಂತೆ ಕಳುಹಿಸಬೇಕು.

ಕನ್ನಡ ಬೆರಳಚ್ಚು ಸೀನಿಯರ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಹಾಗೂ ಉದ್ಯೋಗ ವಿನಿಮಯ ಕಚೇರಿಯಲ್ಲಿ ನೋಂದಣಿ ಚಾಲ್ತಿಯಲ್ಲಿರುವ ನಿರುದ್ಯೋಗಿ ಬೆರಳಚ್ಚುಗಾರರಿಗೆ/ಶೀಘ್ರಲಿಪಿಗಾರರಿಗೆ ಜಾಬ್ ಟೈಪಿಂಗ್ ಸಲುವಾಗಿ ಕನ್ನಡ ಬೆರಳಚ್ಚು ಯಂತ್ರವನ್ನು ಕೊಂಡುಕೊಳ್ಳಲು 3,000 ರೂ.ಗಳನ್ನು ಹಾಗೂ ನಿಮ್ನ ಜಾತಿ/ವರ್ಗದ ಅಭ್ಯರ್ಥಿಗಳಿಗೆ 4,000 ರೂ.ಗಳನ್ನು ಸಾಲ ರೂಪದ ಧನಸಹಾಯವನ್ನಾಗಿ ನೀಡಲಾಗುವುದು. ಈ ಸೌಲಭ್ಯವನ್ನು ಪಡೆಯುವ ಅಭ್ಯರ್ಥಿಗಳು, ಯಾವುದಾದರೂ ಒಂದು ನ್ಯಾಯಾಲಯದ ಅಥವಾ ಸರ್ಕಾರಿ ಕಛೇರಿಯ ಹತ್ತಿರ ಜಾಬ್ ಟೈಪಿಂಗ್ ಮಾಡಬೇಕು. ಹೀಗೆ ಎರಡು ವರ್ಷ ಸತತವಾಗಿ ಜಾಬ್ ಟೈಪಿಂಗ್ ಮಾಡಿದ್ದಲ್ಲಿ ಸದರಿ ಸಾಲವನ್ನು ಧನ ಸಹಾಯವೆಂದು ಪರಿಗಣಿಸಲಾಗುವುದು.

2. ಹೊರ ರಾಜ್ಯದ ವಿಶ್ವ ವಿದ್ಯಾನಿಲಯಗಳಲ್ಲಿ 1989-90ನೇ ಸಾಲಿನಲ್ಲಿ ಕನ್ನಡ ಎಂ.ಎ., ಎಂ.ಫಿಲ್. ಹಾಗೂ ಸಂಶೋಧನೆ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಕ್ರಮವಾಗಿ 1500 ರೂ ಮತ್ತು 3000 ರೂ.ಗಳ ಧನಸಹಾಯವನ್ನು ನೀಡುವರು ಆಸಕ್ತ ವಿದ್ಯಾರ್ಥಿಗಳು ಆಯಾ ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗದ ಮುಖ್ಯಸ್ಥರಿಂದ ನಿಗದಿತ ಅರ್ಜಿಯನ್ನು ಪಡೆದು ಅವರ ಮೂಲಕ ನಿರ್ದೇಶಕರಿಗೆ ಕಳಿಸಬೇಕು.

3. ಕನ್ನಡ ಮಾಧ್ಯಮ ತೆಗೆದುಕೊಂಡು ಪಿ.ಯು.ಸಿ. ಮುಗಿಸಿ ಪ್ರಥಮ ಪದವಿಯಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಪಿ.ಯು ಸಿ ಪರೀಕ್ಷೆಯಲ್ಲಿ ಪಡೆದ ಹೆಚ್ಚಿನ ಅಂಕಗಳ ಆಧಾರದ ಮೇಲೆ ತಿಂಗಳಿಗೆ ರೂ. 50ರಂತೆ 10 ತಿಂಗಳಿಗೆ 500 ರೂ.ಗಳನ್ನು ಮಂಜೂರು ಮಾಡಲಾಗುವುದು. ಈ ಸೌಲಭ್ಯವು 1988-89ರ ಸಾಲಿನಲ್ಲಿ ಪ್ರಥಮ ಪದವಿ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಅನ್ವಯಿಸುವುದು ಪ್ರಥಮ ಮತ್ತು ದ್ವಿತೀಯ ಪದವಿಯಲ್ಲಿ ಕನ್ನಡ ಮಾಧ್ಯಮದಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದುವ ವಿದ್ಯಾರ್ಥಿಗಳಿಗೆ ಮುಂದಿನ ವರ್ಷವೂ ಈ ವಿದ್ಯಾರ್ಥಿ ವೇತನವನ್ನು ನವೀಕರಿಸಬಹುದಾಗಿದೆ.

4. ಬಿ.ಎ., ಬಿ ಕಾಂ, ಬಿ.ಎಸ್.ಸಿ ಬಿ ಇಡಿ., ಬಿ.ಎಸ್.ಸಿ. (ಅಗ್ರಿ), ಬಿ ಎ... (ಲಿಬ್). ಬಿ.ಎ., ಎಂ ಎ. ಪದವಿ ಪರೀ... ಗಳನ್ನು 1988-89ರ ಸಾಲಿನಲ್ಲಿ ಕನ್ನ... ದಲ್ಲಿ ಬರೆದು ಉತ್ತೀರ್ಣರಾದ ವಿದ್ಯಾರ್ಥಿ... ಗಳಿಗೆ 1000 ರೂ.ಗಳ ನಗದು ಬಹುಮಾ... ನ ಕೊಡಲಾಗುವುದು. ಒಂದು ವಿಶ್ವವಿದ್ಯಾ... ನಿಲಯದ ಒಂದೊಂದು ಪದವಿಗೆ ಒಂದ... ಬಹುಮಾನವನ್ನು ಕೊಡುವ ಅವಕಾಶವಿ... ಆಸಕ್ತ ವಿದ್ಯಾರ್ಥಿಗಳು ತಾವು ಪದವಿ ಪರೀ... ಕ್ಷೆಯನ್ನು ಕನ್ನಡದಲ್ಲಿ ಬರೆದು ಉತ್ತೀರ್ಣ... ರಾದ ಬಗ್ಗೆ ವ್ಯಾಸಂಗ ಮಾಡಿದ ಕಾಲೇಜಿ... ಪ್ರಿನ್ಸಿಪಾಲರಿಂದ ಪ್ರಮಾಣ ಪತ್ರ ಲಗತ್ತಿ... ಬೇಕು.

## ಸಣ್ಣಕೆರೆ ಶ್ರೀನಿವಾಸ್ ನಿಧನ

ಕೊಪ್ಪ : ಜನತಾ ದಳದ ಸಕ್ರಿಯ ಕಾರ್ಯಕರ್ತರಾಗಿದ್ದ ಇಲ್ಲಿಗೆ ಸಮೀಪದ ಸಣ್ಣಕೆರೆ ಶ್ರೀನಿವಾಸ್ ಅವರು ನ. 27ರ ರಾತ್ರಿ ಹಠಾತ್ ಹೃದಯಾಘಾತದಿಂದ ನಿಧನರಾದರು. ಅವರಿಗೆ ಕೇವಲ 45 ವರ್ಷ ವಯಸ್ಸಾಗಿತ್ತು. ಮಾಜಿ ಪಂಚಾಯ್ತಿ ಸದಸ್ಯರೂ ಆಗಿದ್ದ ಅವರು ಕಳೆದ 2 ಬಾರಿಯಿಂದ ಕೊಪ್ಪ ವ್ಯವಸಾಯ ಸೇವಾ ಸಹಕಾರ ಸಂ... ಅಧ್ಯಕ್ಷರಾಗಿ, ತೀವ್ರ ನಷ್ಟದಲ್ಲಿದ್ದ ಸಂಘ... ದಲ್ಲಿ ಹಲವಾರು ಸುಧಾರಣೆಗಳನ್ನು ತರು... ವಲ್ಲಿ ಯಶಸ್ವಿಯಾಗಿದ್ದರು.

ಇವರ ನಿಧನಕ್ಕೆ ಕೊಪ್ಪ ತಾ॥ ಜನತಾ ದಳ ಅಧ್ಯಕ್ಷರು ಮತ್ತು ಕಾರ್ಯದರ್ಶಿ ತೀವ್ರ ಸಂತಾಪ ವ್ಯಕ್ತಪಡಿಸಿದ್ದಾರೆ.

## ಕಿಗ್ಗದಲ್ಲಿ ಕ. ಸಾ. ಪ. ದತ್ತಿ ಉಪನ್ಯಾಸ

ಕಿಗ್ಗ : ಶೃಂಗೇರಿ ತಾ॥ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಇಲ್ಲಿನ ಪ್ರೌಢ ಶಾಲೆಯಲ್ಲಿ ಎಂ. ಎಸ್. ಕಸ್ತೂರಿಯವರನ್ನು ಕುರಿತು ದತ್ತಿ ಉಪನ್ಯಾಸ ನಡೆಯಿತು. ಶೃಂಗೇರಿಯ ಹರಿಕಥಾ ವಿದ್ವಾನ್ ಯಶವಂತ ಭಟ್ 'ಸಂಗೀತದಲ್ಲಿ ಸಾಹಿತ್ಯ' ಕುರಿತು ಉಪನ್ಯಾಸ ನೀಡಿದರು.

ತಾ॥ ಕ. ಸಾ. ಪ. ಗೌರವಾಧ್ಯಕ್ಷ ಡಾ॥ ಹುಲ್ಸೆ ಮಂಜಪ್ಪ ಗೌಡರ ಅಧ್ಯಕ್ಷತೆಯಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ತಾ॥ ಅಧ್ಯಕ್ಷ ದ. ರಾಜಣ್ಣ ಪರಿಷತ್ತಿನ ಕಾರ್ಯ ಚಟುವಟಿಕೆಯನ್ನು ವಿವರಿಸಿದರು. ಈಚಿಗೆ ನಿಧನರಾದ ಖ್ಯಾತ ಸಾಹಿತಿ ಬಸವರಾಜ ಕಟ್ಟೀಮನಿಯವರ ಬದುಕು-ಬರಹ ಪರಿಚಯಿಸಿ ಮಾತನಾಡಿದ ಟಿ. ಎಸ್. ವೆಂಕಣ್ಣಯ್ಯ, 'ಖಡ್ಗಕ್ಕಿಂತ ಲೇಖನಿ ಹರಿತ' ಎಂಬ ಮಾತನ್ನು ಕಟ್ಟೀಮನಿಯವರು ತಮ್ಮ ಬರಹಗಳಲ್ಲಿ ತೋರಿಸಿದ್ದಾರೆಂದರು. ಲಕ್ಷ್ಮೀನಾರಾಯಣರಾವ್ ಮುಖ್ಯ ಅತಿಥಿಯಾಗಿದ್ದರು. ದಕ್ಷಿಣಾಮೂರ್ತಿ ಸ್ವಾಗತಿಸಿ ಸುಬ್ಬಣ್ಣ ವಂದಿಸಿದರು. ಪರಿಷತ್ತಿನ ತಾ॥ ಕಾರ್ಯದರ್ಶಿ ಎಚ್. ಎ. ಶ್ರೀನಿವಾಸ್ ಕಾರ್ಯಕ್ರಮ ನಿರ್ವಹಿಸಿದರು.

### ಪೇಟೆ ಧಾರಣೆ

**ಅಡಿಕೆ**

ಶಿವಮೊಗ್ಗ : 1-12-1989
ಸರಕು : 3020-3550
ಬೆಟ್ಟೆ : 2471-2779
ಗೊರಬಲು : 1000-1600
ಸಾಗರ : 1.12.1989
ಇಡಿ : 2375-2530
ಚಾಲಿ : 2629-2812
ಆಪಿ : 3080-3233
ಸಿಪ್ಪೆ ಗೋಟು : 1039-1239

'ಮುಂಜಾವು' ಚಂದಾ ಹಣ ಕಳಿಸಿ
ಸ ಹ ಕ ರಿ ಸಿ
ವಾರ್ಷಿಕ ಚಂದಾ : ರೂ. 35-00



## ಕೃತಜ್ಞತೆಗಳು

ಆತ್ಮೀಯರೇ,

ತಾ॥ 24-11-89 ರ ಚುನಾವಣೆಯಲ್ಲಿ ಶೃಂಗೇರಿ ವಿಧಾನ ಸಭಾ ಕ್ಷೇತ್ರದ ಜನತಾ ದಳದ ಅಭ್ಯರ್ಥಿಯಾಗಿ ಸ್ಪರ್ಧಿಸಿದಾಗ ನನ್ನ ಪರವಾಗಿ ಸಹಕರಿಸಿದ ಎಲ್ಲ ಕಾರ್ಯಕರ್ತರಿಗೆ ಮತ್ತು ಮತದಾರ ಬಂಧುಗಳಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ನಾನು ಶಾಸಕನಾಗಿದ್ದ 6 ವರ್ಷಗಳಲ್ಲಿ ಕ್ಷೇತ್ರದ ಎಲ್ಲ ವರ್ಗಗಳ ಜನರ ಸರ್ವತೋಮುಖ ಅಭಿವೃದ್ಧಿಗಾಗಿ ಶಕ್ತಿ ಮೀರಿ ಶ್ರಮಿಸಿದ್ದೇನೆಂಬ ಸಂತೃಪ್ತಿಯೊಡನೆ ಜನರ ತೀರ್ಪನ್ನು ಒಪ್ಪಿಕೊಂಡಿದ್ದೇನೆ.

ಹಿಂದಿನಂತೆಯೇ ಕ್ಷೇತ್ರದ ಜನರ ಸೇವೆಯನ್ನು ಮುಂದುವರಿಸಲು ಬದ್ಧನಾಗಿರುತ್ತೇನೆ.

**ಸದಾ ತಮ್ಮ ಸಹಕಾರವನ್ನು ಬಯಸುವ,**

ತಮ್ಮೆಲ್ಲರ ಸೇವಾಕಾಂಕ್ಷಿ,
**ಎಚ್. ಜಿ. ಗೋವಿಂದ ಗೌಡ**

## ಕೊಪ್ಪ ತಾಲ್ಲೂಕ್ ಜನತಾ ದಳ

ಆತ್ಮೀಯರೇ,

ಇದೇ ತಾ॥ 6-12-1989 ನೇ ಬುಧವಾರ ಬೆಳಿಗ್ಗೆ 11-00 ಗಂಟೆಗೆ ಕೊಪ್ಪ ಪುರಭವನದಲ್ಲಿ ತಾಲ್ಲೂಕು ಜನತಾ ದಳದ ಕಾರ್ಯಕರ್ತರ, ಪದಾಧಿಕಾರಿಗಳ ಮತ್ತು ಅಭಿಮಾನಿಗಳ ಸಭೆಯನ್ನು ಕರೆಯಲಾಗಿದೆ. ತಾ॥ ಜನತಾ ದಳದ ಅಧ್ಯಕ್ಷರಾದ ಶ್ರೀ. ಎನ್. ವಿ. ಆನಂದರಾಮ ಭಟ್ಟರು ಅಧ್ಯಕ್ಷತೆ ವಹಿಸುತ್ತಾರೆ. ಮಾಜಿ ಶಾಸಕರಾದ ಶ್ರೀ ಎಚ್. ಜಿ. ಗೋವಿಂದ ಗೌಡರು ಸಭೆಯಲ್ಲಿ ಭಾಗವಹಿಸುತ್ತಾರೆ.

ಎಲ್ಲರೂ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಬೇಕಾಗಿ ಕೋರುತ್ತೇನೆ.

**ಎಚ್. ಎಸ್. ಕಳಸಪ್ಪ,**
ಕಾರ್ಯದರ್ಶಿ,
ತಾ॥ ಜನತಾ ದಳ, ಕೊಪ್ಪ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚು ಕೂಟ, ಕೊಪ್ಪ.